

ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೧೦-೧೧ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಪಂಪ ಮತ್ತು ರತ್ನಾಕರವರ್ಣಿಯ ಕಾವ್ಯಗಳಲ್ಲಿ ಭರತ - ಬಾಹುಬಲಿಯ ಪ್ರಸಂಗ

ನಿಬಂಧಕಾರರು

ರಾಮಕೃಷ್ಣ ಎಚ್.ಎನ್.

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಲೀಲಾ ಅಪ್ಪಾಜಿ

ಪ್ರಾಂಶುಪಾಲರು
ಮಹಿಳಾ ಸರ್ಕಾರಿ ಕಾಲೇಜು, ಮದ್ದೂರು



ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೦-೧೧



ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೧೦-೧೧ನೇ ಸಾಲಿನ ಎಂ.ಫಿಲ್ ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಪಂಪ ಮತ್ತು ರತ್ನಾಕರವರ್ಣಿಯ ಕಾವ್ಯಗಳಲ್ಲಿ ಭರತ-ಬಾಹುಬಲಿಯ ಪ್ರಸಂಗ

ಸಂಶೋಧಕರು

**ರಾಮಕೃಷ್ಣ ಎಚ್.ಎಸ್.**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಕ.ವಿ.ವಿ. ಹಂಪಿ)

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು



ಮಾರ್ಗದರ್ಶಕರು

**ಡಾ. ಲೀಲಾ ಅಪ್ಪಾಜಿ**

ಪ್ರಾಂಶುಪಾಲರು

ಮಹಿಳಾ ಸರ್ಕಾರಿ ಕಾಲೇಜು, ಮದ್ದೂರು.

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೦-೧೧

# ದೃಢೀಕರಣ ಪತ್ರ

೨೦೧೦-೧೧ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS/00476**ರ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ **ರಾಮಕೃಷ್ಣ ಎಚ್.ಎನ್.**ಅವರು ನನ್ನ ಮಾರ್ಗದರ್ಶನದಲ್ಲಿ **"ಪಂಪ ಮತ್ತು ರತ್ನಾಕರವರ್ಣಿಯ ಕಾವ್ಯಗಳಲ್ಲಿ ಭರತ - ಬಾಹುಬಲಿಯುಪ್ರಸಂಗ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**ಮೈಸೂರು**
೩೧-೦೫-೨೦೧೧

(ಡಾ. ಲೀಲಾ ಅಪ್ಪಾಜಿ)
ಪ್ರಾಂಶುಪಾಲರು
ಕನ್ನಡ ವಿಭಾಗ,
ಮಹಿಳಾ ಸರ್ಕಾರಿ ಕಾಲೇಜು, ಮದ್ದೂರು.

# ಅಭ್ಯರ್ಥಿಯ ಘೋಷಣಾ ಪತ್ರ

**"ಪಂಪ ಮತ್ತು ರತ್ನಾಕರವರ್ಣಿಯ ಕಾವ್ಯಗಳಲ್ಲಿ ಭರತ-ಬಾಹುಬಲಿಯ ಪ್ರಸಂಗ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ **KVTM/K0476**ರ ವಿದ್ಯಾರ್ಥಿಯಾದ ನಾನು ೨೦೧೦-೧೧ನೇ ಸಾಲಿನ ಪರೀಕ್ಷೆಗಾಗಿ **ಡಾ. ಲೀಲಾ ಅಪ್ಪಾಜಿ**, ಪ್ರಾಂಶುಪಾಲರು ಮತ್ತು ಸಹಪ್ರಾಧ್ಯಾಪಕರು, ಕನ್ನಡ ವಿಭಾಗ, ಮಹಿಳಾ ಸರ್ಕಾರಿ ಕಾಲೇಜು, ಮದ್ದೂರು ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಮೈಸೂರು**
೩೧-೦೫-೨೦೧೧

**(ರಾಮಕೃಷ್ಣ.ಎಚ್.ಎನ್)**
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಪಂಪ ಮತ್ತು ರತ್ನಾಕರವರ್ಣಿಯ ಕಾವ್ಯಗಳಲ್ಲಿ ಭರತ-ಬಾಹುಬಲಿ ಪ್ರಸಂಗ

## ಪರಿವಿಡಿ



*****

# ಅಧ್ಯಾಯ – ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯದಲ್ಲಿಯೇ ಭರತ–ಬಾಹುಬಲಿ ಪ್ರಸಂಗ ಒಂದು ಮಹತ್ವದ ಮತ್ತು ರೋಚಕ ಪ್ರಸಂಗವಾಗಿದೆ. ಪಂಪ ಮತ್ತು ರತ್ನಾಕರವರ್ಣಿ ಕನ್ನಡ ಸಾಹಿತ್ಯದಲ್ಲಿಯೇ ಅತ್ಯಂತ ಮಹತ್ವದ ಕವಿಗಳಾಗಿದ್ದಾರೆ. ಭಾರತೀಯ ಸಂಸ್ಕೃತಿ ಮತ್ತು ಪರಂಪರೆಯ ದ್ಯೋತಕವಾಗಿ ಈ ಕಥೆ ಕಂಡುಬರುವುದರಿಂದ ಅದನ್ನು ನಿರೂಪಿಸುವುದೇ ಉದ್ದೇಶ ಮತ್ತು ವ್ಯಾಪ್ತಿಯಾಗಿದೆ. ಪಂಪನು ಆದಿಪುರಾಣದಲ್ಲಿ ಭರತ–ಬಾಹುಬಲಿ ಪ್ರಸಂಗವನ್ನು ತನ್ನ ಕಾವ್ಯದ ಒಂದು ಭಾಗವಾಗಿ ತೆಗೆದುಕೊಂಡಿದ್ದಾನೆ. ಆದಿಪುರಾಣ ಎಂದ ತಕ್ಷಣ ಈ ಪ್ರಸಂಗವು ಗಮನ ಸೆಳೆಯುವಷ್ಟರಮಟ್ಟಿಗೆ ಅಲ್ಲಿನ ಪಾತ್ರಗಳನ್ನು ಚಿತ್ರಿಸಿದ್ದಾನೆ.

ಪಂಪನು ಜಿನಸೇನಾಚಾರ್ಯರ ಪೂರ್ವಪುರಾಣದಿಂದ ಈ ಪ್ರಸಂಗವನ್ನು ತೆಗೆದುಕೊಂಡಿದ್ದರೂ ತನ್ನದೇ ಆದ ರೀತಿಯಲ್ಲಿ ಚಿತ್ರಿಸಿರುವುದನ್ನು ನೋಡಬಹುದಾಗಿದೆ. ಒಂದೇ ವಸ್ತುವನ್ನು ತೆಗೆದು–ಕೊಂಡು ಈ ಇಬ್ಬರು ಕವಿಗಳು ಹೇಗೆ ಚಿತ್ರಿಸಿದ್ದಾರೆ ಎಂಬುದು ಕುತೂಹಲಕಾರಿ ಸಂಗತಿಯಾಗಿದೆ. ಪಂಪ ಮತ್ತು ರತ್ನಾಕರವರ್ಣಿಯ ಕೃತಿಗಳಲ್ಲಿ ಕಂಡುಬರುವ ಸಾದೃಶ್ಯ–ವೈದೃಶ್ಯಗಳೇನು? ಎಂಬುದರ ವಿಶ್ಲೇಷಣೆ ಹಾಗೂ ತೌಲನಿಕ ಅಧ್ಯಯನವನ್ನು ಮಾಡಲು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಪಂಪನ ಕೃತಿಗೆ ಮೂಲಾಧಾರ ಸಂಸ್ಕೃತ ಜಿನಸೇನಾಚಾರ್ಯರ ಪೂರ್ವಪುರಾಣ. ಜಿನಸೇನಾಚಾರ್ಯರರ ತಾತ್ತ್ವಿಕ ವಿಚಾರಗಳನ್ನೊಳಗೊಂಡಂತೆ ತನ್ನ ಕೃತಿಯನ್ನು ಮಾನವೀಯ ಮೌಲ್ಯದ ನೆಲೆಯಲ್ಲಿ ರಚಿಸಿದ್ದಾನೆ.

ಅಂತಹ ವಸ್ತುವನ್ನು ತೆಗೆದುಕೊಂಡು ಪಂಪನು ಮಾನವೀಯ ಮೌಲ್ಯದ ನೆಲೆಯಲ್ಲಿ ತನ್ನ ಕೃತಿಯನ್ನು ಹೇಗೆ ರಚಿಸಿದ್ದಾನೆ? ಮತ್ತು ತನ್ನ ಅದ್ಭುತ ಸ್ವತಂತ್ರ ಪ್ರತಿಭೆಯನ್ನು ಹೇಗೆ ಮೆರೆದಿದ್ದಾನೆ? ಎಂಬುದನ್ನು ಮುಂದೆ ನೋಡಬಹುದಾಗಿದೆ. ಹಾಗೆಯೇ ರತ್ನಾಕರವರ್ಣಿಯು ಪೂರ್ವಪುರಾಣ ಮತ್ತು ಆದಿಪುರಾಣಗಳೆರಡನ್ನು ಆಧಾರವಾಗಿ ತೆಗೆದುಕೊಂಡಿದ್ದರೂ ಸಹ ಜೈನಧರ್ಮದ ತತ್ತ್ವಗಳನ್ನು ಪ್ರಸಾರ ಮಾಡುವ ಉದ್ದೇಶವನ್ನಿಟ್ಟುಕೊಂಡು ಹೇಗೆ ತನ್ನ ಕೃತಿಯಲ್ಲಿ ಅದನ್ನು ನಿರೂಪಿಸಿದ್ದಾನೆ ಮುಂದೆ ಪರಿಶೀಲಿಸುವ ಉದ್ದೇಶವಿದೆ.

ರತ್ನಾಕರವರ್ಣಿಯು ಪಂಪನ ಹಾಗೆ ಮಹಾಕವಿಯಲ್ಲದಿದ್ದರೂ ಶ್ರೇಷ್ಠಮಟ್ಟದ ಕವಿಯಾಗಿದ್ದಾನೆ. ಪಂಪನ ಆದಿಪುರಾಣದಲ್ಲಿ ಈ ಪ್ರಸಂಗ ಅತ್ಯಂತ ಆಕರ್ಷಣೀಯ–

ವಾಗಿ ಚಿತ್ರಿತವಾಗಿದೆ. ಅದರಲ್ಲಿಯೂ ಬಾಹುಬಲಿಯ ಪಾತ್ರವನ್ನು ಹೇಗೆ ಉನ್ನತೀಕರಿಸಿದ್ದಾನೆ ಎಂಬುದನ್ನು ನೋಡುವ ಉದ್ದೇಶವನ್ನು ಇಲ್ಲಿ ಕೈಗೊಳ್ಳಲಾಗಿದೆ.

ರತ್ನಾಕರವರ್ಣಿಯು ತನ್ನ ಕಾವ್ಯದ ನಾಯಕನನ್ನಾಗಿ ಮಾಡಿಕೊಂಡಿರುವ ಭರತನ ಪಾತ್ರವನ್ನು ಹೇಗೆ ವೈಭವೀಕರಿಸಿದ್ದಾನೆ ಎಂಬುದನ್ನು ಮುಂದೆ ನೋಡಬಹುದಾಗಿದೆ. ಇಲ್ಲಿ ಭರತನು ಒಬ್ಬ ಚಕ್ರವರ್ತಿ ಮತ್ತು ಪರಮಪುರುಷನಾಗಿ ಕಂಡುಬರುತ್ತಾನೆ.

ಪಂಪನು ತನ್ನ ಕಾವ್ಯದಲ್ಲಿ ಒಂದು ಭಾಗವಾಗಿ ಇದನ್ನು ಚಿತ್ರಿಸಿದ್ದರೆ, ರತ್ನಾಕರವರ್ಣಿಯು ಈ ಒಂದು ಭಾಗವನ್ನೇ ತನ್ನ ಇಡೀ ಕೃತಿಯ ವಸ್ತುವನ್ನಾಗಿ ತೆಗೆದುಕೊಂಡು ತನ್ನ ಪ್ರತಿಭಾಸಾಮರ್ಥ್ಯವನ್ನು ಹೇಗೆ ಮೆರೆದಿದ್ದಾನೆ ಎಂಬುದನ್ನು ನೋಡಬಹುದಾಗಿದೆ.

ಈ ಪ್ರಸಂಗವನ್ನು ಇವರಿಬ್ಬರು ಹೇಗೆ ತಮ್ಮ ಕೃತಿಯಲ್ಲಿ ಅಳವಡಿಸಿಕೊಂಡಿದ್ದಾರೆ ಎಂಬುದನ್ನು ನೋಡುವುದು ಇಲ್ಲಿಯ ಉದ್ದೇಶವಾಗಿದೆ. ಇಲ್ಲಿ ಬಾಹುಬಲಿಯ ತ್ಯಾಗ ಕಂಡುಬರುತ್ತದೆ. ಗೆಲ್ಲುವುದು ಸರಿ, ಆದರೆ ತಾನು ಗೆದ್ದು ಕಾವ್ಯವನ್ನು ಉದಾರ ಮನಸ್ಸಿನಿಂದ ಹಿಂದಿರುಗಿ ಕೊಡುವ ತ್ಯಾಗಬುದ್ಧಿ ಬಾಹುಬಲಿಯ ಪಾತ್ರದಲ್ಲಿ ಕಂಡುಬರುತ್ತದೆ. ಬಾಹುಬಲಿಯ ಆದರ್ಶವನ್ನು ಚಿತ್ರಿಸುವುದು ಪಂಪನ ಉದ್ದೇಶವಾಗಿದೆ. ಬಾಹುಬಲಿಯನ್ನು ಒಬ್ಬ ತೀರ್ಥಂಕರನ ಮಟ್ಟಕ್ಕೆ ಏರಿಸಿದ್ದಾನೆ.

ಈ ಕಥೆಯ ಜನಪ್ರಿಯತೆಯ ಕಾರಣದಿಂದ ಈ ವಸ್ತುವನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಜನಸಾಮಾನ್ಯರಲ್ಲಿಯೂ ಆಸ್ತಿಯ ವಿಚಾರವಾಗಿ ವೈರತ್ವ, ಜಗಳಗಳು ನಡೆಯುತ್ತವೆ. ಇಲ್ಲಿ ಕವಿಗಳಿಬ್ಬರೂ ಸಾಮ್ರಾಜ್ಯಕ್ಕೋಸ್ಕರ ಈ ವಿರಸ ಹೇಗೆ ನಡೆಯುತ್ತದೆ ಎಂಬುದನ್ನು ಇಲ್ಲಿ ನಿರೂಪಿಸುತ್ತಾ ಹೋಗುತ್ತಾರೆ.

ರತ್ನಾಕರವರ್ಣಿಯು ಆದಿ ತೀರ್ಥಂಕರನ ಮಗನಾದ ಭರತನನ್ನು ಇಲ್ಲಿ ತನ್ನ ಕಾವ್ಯದ ನಾಯಕನನ್ನಾಗಿ ಮಾಡಿಕೊಂಡಿದ್ದಾನೆ. ಇವನು ತೀರ್ಥಂಕರ ಮತ್ತು ಚಕ್ರವರ್ತಿಯೂ ಕೂಡ ಆಗಿದ್ದನು. ಜೈನರಲ್ಲಿ ಭೋಗದ ತುತ್ತತುದಿಯಲ್ಲಿರುವಾಗಲೇ ವೈರಾಗ್ಯದರ್ಥ ಹೊಳೆದು ಮೋಕ್ಷ ಸಂಪಾದಿಸುವುದನ್ನು ಭರತನ ಮೂಲಕ ತಿಳಿಯಪಡಿಸಿದ್ದಾನೆ.

ಇಬ್ಬರು ಕವಿಗಳು ಭಿನ್ನ ಭಿನ್ನ ನೆಲೆಯಲ್ಲಿ ಭಿನ್ನ ದೃಷ್ಟಿಕೋನದಲ್ಲಿ ಹೇಗೆ ನಿರೂಪಿಸಿದ್ದಾರೆಂಬುದನ್ನು ತಿಳಿಸುವುದೇ ಇಲ್ಲಿನ ಅಧ್ಯಯನದ ಉದ್ದೇಶವಾಗಿದೆ.

ರತ್ನಾಕರವರ್ಣಿಯು ತನ್ನ ಕೃತಿಯಲ್ಲಿ ತ್ಯಾಗ-ಭೋಗ ಸಮನ್ವಯತೆಯನ್ನು ಸಾಧಿಸಲು ಹೊರಟಿರುವುದನ್ನು ನೋಡಬಹುದಾಗಿದೆ.

೧೦ನೇ ಶತಮಾನ ಜೈನಸಾಹಿತ್ಯಕ್ಕೆ ಸಂಬಂಧಿಸಿದಂತೆ ಸುವರ್ಣಯುಗ ಎಂಬುದು ನಿಜವಾಗಿದ್ದರೂ, ಅನ್ಯಧರ್ಮಗಳೂ ಆ ಕಾಲಕ್ಕೆ ಮೊಳಕೆಯೊಡೆಯುತ್ತಿದ್ದವು. ಪಂಪನ ೧೦ನೇ ಶತಮಾನದಲ್ಲಿ ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿದಂತೆ ರಾಜಕೀಯವಾಗಿ ಏರುಪೇರುಗಳು ಕಂಡೂಕಾಣದಂತಿದ್ದವು. ಪಂಪನಲ್ಲಿ ವೈದಿಕ ಮತ್ತು ಜೈನಸಂಸ್ಕೃತಿಗಳೆರಡೂ ಮನೆಮಾಡಿದ್ದವು. ಪಂಪನ ತಾತಮಾಧವ ಸೋಮಯಾಜಿಗಳು ಸ್ವತಃ ನಿಷ್ಠಾವಂತ ವೈದಿಕರು. ಶ್ರೀವತ್ಸಗೋತ್ರಕ್ಕೆ ಸೇರಿದ ಅವರು ಜನಮನ್ನಣೆ ಪಡೆದು ವಿಶೇಷ ಗೌರವಕ್ಕೆ ಪಾತ್ರರಾಗಿದ್ದರು. ಪಂಪನಿಗೂ ಆ ಬಗ್ಗೆ ಹೆಮ್ಮೆ, ಅಭಿಮಾನವಿತ್ತು. ಪಂಪನ ತಂದೆ ಜಿನಧರ್ಮವನ್ನು ಸ್ವೀಕರಿಸಿದನು. ಈ ಎರಡೂ ಅವನನ್ನು ಸಂಘರ್ಷಕ್ಕೆ ಒಳಪಡಿಸದಿದ್ದರೂ ಅವೆರಡನ್ನೂ ಸಮನ್ವಯಗೊಳಿಸುವ ಮನಸ್ಸು ಪಂಪನಿಗೆ ಇದ್ದಿರಬಹುದು. ಎಲ್ಲಕ್ಕೂ ಮಿಗಿಲಾಗಿ ಪಂಪ ಮೂಲತಃ ಸೃಜನಶೀಲ ಕವಿ ಹಾಗೂ ಮಾನವೀಯ ಮೌಲ್ಯಗಳ ಪ್ರಜ್ಞೆಯುಳ್ಳವನು. ಈ ಎಲ್ಲದರ ಹಿನ್ನೆಲೆಯಲ್ಲಿ ಪಂಪನು ತನ್ನ ಕೃತಿಯನ್ನು ರಚಿಸಿದ್ದಾನೆ.

ರತ್ನಾಕರವರ್ಣಿ ಬದುಕಿದ್ದು ೧೬ನೇ ಶತಮಾನದ ಮಧ್ಯಭಾಗದಲ್ಲಿ. ಆಗ ವಿಜಯನಗರ ಸಾಮ್ರಾಜ್ಯ ತನ್ನ ವೈಭವದ ಕಾಲವನ್ನು ದಾಟಿ ಇಳಿಮುಖದ ದಾರಿ ಹಿಡಿದಿತ್ತು. ಆದರೂ ಅದು "ದಕ್ಷಿಣ ಭಾರತದ ಕನ್ನಡ, ತಮಿಳು, ತೆಲುಗು ಮುಂತಾದ ಎಲ್ಲ ಭಾಷೆಗಳ ಹಾಗೂ ಶೈವ, ವೈಷ್ಣವ, ವೀರಶೈವ, ಜೈನ, ಮುಸ್ಲಿಂ ಮುಂತಾದ ಎಲ್ಲ ಮತಗಳ ಆಶ್ರಯ ತಾಣವಾಯಿತು. ಸಮಗ್ರ ಭಾರತದ ಪೂರ್ವ ಪರಂಪರೆಯಲ್ಲಿಯ ವೈದಿಕ ಧರ್ಮವನ್ನು ಅದು ಎತ್ತಿಹಿಡಿಯಿತು. ಕನ್ನಡಿಗರ ಸಮನ್ವಯ ಬುದ್ಧಿ ಈ ಕಾಲದ್ಲಲಿ ಕಳಶಮುಟ್ಟಿತು"[೧]

ರತ್ನಾಕರವರ್ಣಿಯ ಕಾಲಕ್ಕೆ ಆಗಲೇ ಕರ್ನಾಟಕದಲ್ಲಿ ಜೈನಧರ್ಮ ತನ್ನ ಪ್ರಾಬಲ್ಯವನ್ನು ಕಳೆದುಕೊಂಡಿತ್ತು. ಈ ವೇಳೆಗಾಗಲೇ ಅದು ವೀರಶೈವ ಧರ್ಮ-ದೊಂದಿಗೆ ಶ್ರೀವೈಷ್ಣವ ಹಾಗೂ ಮಾಧ್ವಮತಗಳೊಂದಿಗೆ ಸೆಣಸಿ, ಸೋತು ನಿಟ್ಟುಸಿರಿಡುವ ಸ್ಥಿತಿಗೆ ಬಂದಿತ್ತು. ಮೊದಲಿನಿಂದಲೂ ಪಶ್ಚಿಮ ಕರಾವಳಿಯಲ್ಲಿ ಅದು ವಿಜಯನಗರ ಸಾಮಂತರಾದ ತುಳವ ಅರಸರ ಆಶ್ರಯದಲ್ಲಿ ರಕ್ಷಣೆಯನ್ನು ಪಡೆದುಕೊಂಡಿದ್ದರೂ ವಿಜಯನಗರದ ಪತನಾನಂತರ ಹದಿನಾರನೆಯ ಶತಮಾನದ ಮಧ್ಯಭಾಗದ ವೇಳೆಗೆ

೧. ಕನ್ನಡ ಸಾಹಿತ್ಯ ಚರಿತ್ರೆ – ರಂ.ಶ್ರೀ.ಮುಗಳಿ, ಪು.ಸಂ. ೨೪೯ (ಉದ್ಧೃತ)

ತುಳುನಾಡಿನ ಅರಸರ ಉತ್ತರಾಧಿಕಾರಿಗಳಾಗಿ ಈ ಭಾಗವನ್ನು ಆಳತೊಡಗಿದ. ಇಕ್ಕೇರಿಯ ಶೈವಮತದ ಅನುಯಾಯಿಗಳಿಂದ ಜೈನರಿಗೆ ಅಳಿವು ಉಳಿವಿನ ಹೋರಾಟವೇ ಆಗಿಹೋಯಿತು. ಉತ್ತರ ಕನ್ನಡ ಜಿಲ್ಲೆಯ ಕೆಲವು ರಾಜಮನೆತನಗಳು ಜೈನಧರ್ಮವನ್ನು ಕೈಬಿಟ್ಟು ವೀರಶೈವಧರ್ಮವನ್ನು ಅವಲಂಬಿಸಿದವು ಎಂಬ ವಿದ್ವಾಂಸರ ಅಭಿಪ್ರಾಯಗಳು ರತ್ನಾಕರವರ್ಣಿಯ ಕಾಲದ ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತಿಗಳನ್ನು ಅನಾವರಣಗೊಳಿಸಿವೆ. ರಾಜರಿಂದಲೂ ಮನ್ನಣೆ ಪಡೆದು ಆಶ್ರಯ ದೊರಕಿಸಿಕೊಂಡಿದ್ದ ಜನಸಾಮಾನ್ಯರ ಮೆಚ್ಚುಗೆಗೂ ಪಾತ್ರವಾಗಿ ಜನಪ್ರಿಯ-ವಾಗಿದ್ದು ವೀರಶೈವಧರ್ಮ ರತ್ನಾಕರ ಕವಿಯ ಮೇಲೆ ಗಾಢವಾದ ಪ್ರಭಾವ ಬೀರಿದೆ" ಎಂಬುದು ಜಿ.ಎಸ್.ಶಿವರುದ್ರಪ್ಪನವರ ಅಭಿಪ್ರಾಯವಾಗಿದೆ.

ವೀರಶೈವಧರ್ಮದಲ್ಲಿ ಇಹ-ಪರದ ವಿಚಾರ ಕಂಡುಬರುತ್ತದೆ. ಸಂಸಾರ-ದಲ್ಲಿದ್ದೂ ಶಿವಯೋಗವನ್ನು ಸಾಧಿಸಬಹುದೆಂಬುದೇ ಅದರ ಸೂತ್ರವಾಗಿತ್ತು. ಇದನ್ನು ರತ್ನಾಕರವರ್ಣಿ ತನ್ನ ಕೃತಿಯಲ್ಲಿ ಬಳಸಿಕೊಂಡಿದ್ದಾನೆ.

ಈ ಎಲ್ಲ ಹಿನ್ನೆಲೆಯಲ್ಲಿ ಜೈನಧರ್ಮದ ಉಚ್ಛ್ರಾಯ ಸ್ಥಿತಿಯ ಕಾಲದಲ್ಲಿದ್ದ ಪಂಪ ಹಾಗೂ ಇಳಿಮುಖದ ಕಾಲದಲ್ಲಿದ್ದ ರತ್ನಾಕರವರ್ಣಿ ಇಬ್ಬರೂ ಒಂದೇ ವಸ್ತುವನ್ನು ನಿರ್ವಹಿಸಿರುವ ರೀತಿಯೂ ಅಧ್ಯಯನಕ್ಕೆ ಯೋಗ್ಯವಾಗಿದೆ.

# ಅಧ್ಯಾಯ - ೨

# ಪಂಪ ಕವಿಯ ಆದಿಪುರಾಣದ ಸ್ಥೂಲ ಪರಿಚಯ

ಸಂಸ್ಕೃತ ಸಾಹಿತ್ಯಕ್ಕೆ ವಾಲ್ಮೀಕಿ ಆದಿಕವಿಯಾದಂತೆ ಕನ್ನಡ ಸಾಹಿತ್ಯಕ್ಕೆ ಪಂಪನೇ ಆದಿಕವಿ. ಪಂಪನ ಕೃತಿಗಳೇ ಮೊದಲನೆಯದಾಗಿ ದೊರೆತ ಕಾವ್ಯಗ್ರಂಥಗಳು. ರತ್ನತ್ರಯರಲ್ಲಿ ಪಂಪ ಮೊದಲಿಗ. ಕನ್ನಡ ಕಾವ್ಯಜಗತ್ತಿನ ಆದಿಕವಿ, ಆದಿಮಹಾಕವಿ, ಕಾಲದೃಷ್ಟಿಯಿಂದಲ್ಲದಿದ್ದರೂ ಯೋಗ್ಯತೆಯ ದೃಷ್ಟಿಯಿಂದ ಈತ ಕನ್ನಡದ ಆದಿಕವಿ. ಇವನು ಸಮನ್ವಯಶೀಲನೂ, ಸವ್ಯಸಾಚಿಯೂ ಆಗಿದ್ದ. ಕವಿ ನಾಗರಾಜ ಹೇಳುವಂತೆ "ಪಸರಿಪ ಕನ್ನಡಕ್ಕೊಡೆಯನೋರ್ವನೇ ಸತ್ಕವಿ ಪಂಪನಾವಗಂ" ಎಂಬ ಮಾತು ಸತ್ಯವಾಗಿದೆ. ಪಂಪನು ಕವಿಯಾಗಿದ್ದಂತೆ ಕಲಿಯೂ ಆಗಿದ್ದನು. "ಏಂ ಕವಿಯೋ ಸತ್ಕವಿಯೋ ಕವಿತಾಗುಣಾರ್ಣವವಂ" ಎಂದು ತನ್ನನ್ನು ತಾನೇ ಹೊಗಳಿಕೊಂಡಿದ್ದಾನೆ.

ಪಂಪ ೨ ಕೃತಿಗಳನ್ನು ರಚಿಸಿದ್ದಾನೆ. ಆದಿತೀರ್ಥಂಕರ ವೃಷಭನಾಥನ ಚರಿತ್ರೆ-ಯನ್ನು ವಸ್ತುವನ್ನಾಗಿವುಳ್ಳ 'ಆದಿಪುರಾಣ' ಹಾಗೂ ವೈದಿಕ ಸಂಪ್ರದಾಯದ ಮಹಾಭಾರತ ಕಥೆಯನ್ನು ವಸ್ತುವನ್ನಾಗುಳ್ಳ 'ವಿಕ್ರಮಾರ್ಜುನ ವಿಜಯ'. ೧೬ ಆಶ್ವಾಸಗಳುಳ್ಳ ಆದಿಪುರಾಣವನ್ನು ವಸ್ತುಕೃತಿ ಎಂದು, ೧೪ ಆಶ್ವಾಸಗಳುಳ್ಳ ವಿಕ್ರಮಾರ್ಜುನ ವಿಜಯನವನ್ನು ಮಹಾಪ್ರಬಂಧ ಎಂದಿದ್ದಾನೆ. ಲಾಕ್ಷಣಿಕವಾಗಿ ಇವು-ಗಳನ್ನು ಚಂಪೂಕಾವ್ಯಗಳೆಂದು ಕರೆಯಬಹುದು. ಈಗ ಈ ಎರಡು ಕೃತಿಗಳ ಕರ್ತೃ-ವಾದ ಮಹಾಕವಿಯ ಕಾಲ, ದೇಶ, ವಂಶ, ಮತ ಮೊದಲಾದವನ್ನು ಕುರಿತು ನೋಡೋಣ.

**ಕವಿಯ ಕಾಲ**

ಆದಿಪುರಾಣದ ಪ್ರಾರಂಭದಲ್ಲಿ ತಾನು ದುಂದುಭಿ ಸಂವತ್ಸರದಲ್ಲಿ ಹುಟ್ಟಿದ್ದಾಗಿ ಹೀಗೆ ಹೇಳಿದ್ದಾನೆ.

ದುಂದುಭಿ ಗಂಭೀರ ನಿನದಂ
ದುಂದುಭಿ ಸಂವತ್ಸರೋದ್ಭವಂ ಪ್ರಕಟ ಯಶೋ
ದುಂದುಭಿ ಸಿಂಹಾಸನ ಸುರ
ದುಂದುಭಿ ಪತಿಚರಣ ಕಮಳ ಭೃಂಗಂ ಪಂಪಂ....

ಆದಿಪುರಾಣದ ರಚನೆಯು ಮುಗಿದ ಕಾಲವನ್ನು ಎರಡು ಪದ್ಯಗಳಲ್ಲಿ ಹೀಗೆ ಹೇಳಿದ್ದಾನೆ.

ಶಕವರ್ಷಮೆಂಟನೂಱ
ಕ್ಕೆ ಕಡೆಯೊಳಱುವತ್ತುಮೂಱು ಸಂದದು ಜಗ
ತ್ಪ್ರಕಟ ಪ್ಲವ ಸಂವತ್ಸರ
ದ ಕಾರ್ತಿಕಂ ಮುದಮನೀಯ ನಂದೀಶ್ವರದೊಳ್

ಸಿತಪಕ್ಷದ ಪಂಚಮದಿನ
ಪತಿವಾರಂ ಶುಭದ ಮೂಲ ನಕ್ಷತ್ರದೊಳ
ನ್ವಿತಮಾಗೆ ನೆಗೞ್ದ ಮ
ತ್ಕೃತಿ ಜಗದೊಳ್ ಪುದಿದು ಸಾಗರಾಂತಕ್ಷಿತಿಯಾ

ಇವುಗಳ ಆಧಾರದ ಮೇಲೆ ಆದಿಪುರಾಣವು ಶಾಲಿವಾಹನ ಶಕ ೮೬೩ರ ಪ್ಲವ ಸಂವತ್ಸರದಲ್ಲಿ ನಂದೀಶ್ವರನೆಂಬಲ್ಲಿ ಮಹಾಪೂಜೆಗಳು ನಡೆಯುವ ಕಾರ್ತಿಕಮಾಸದಲ್ಲಿ ಶುಕ್ಲಪಕ್ಷದ ಪಂಚಮ ತಿಥಿಯಂದು ಭಾನುವಾರದ ದಿನ ಮೂಲ ನಕ್ಷತ್ರವಿರುವಾಗ ಮುಗಿಯಿತೆಂದು ತಿಳಿಯುತ್ತದೆ. ೮೬೩ನೆಯ ಪ್ಲವ ಸಂವತ್ಸರವು ಕ್ರಿ.ಶ.೯೪೧ಕ್ಕೆ ಸರಿಹೊಂದುತ್ತದೆ ಎಂದು ಸಾಹಿತ್ಯ ಚರಿತ್ರೆಕಾರರು, ಇತರರು ಇದನ್ನೇ ಹೇಳಿರುವುದು ಪ್ರಸಿದ್ಧವಾಗಿದೆ. ಆದರೆ ಪಂಪನು ಕೊಟ್ಟಿರುವ ಆದಿಪುರಾಣದ ರಚನಾ ಕಾಲದ ಸಂವತ್ಸರಾದಿ ವಿವರಗಳು ಕ್ರಿ.ಶ.೯೪೧ಕ್ಕೆ ಸರಿಹೊಂದುವುದಿಲ್ಲವೆಂದು ಅದು ಕ್ರಿ.ಶ. ೯೪೨ರ ಅಕ್ಟೋಬರ್ ೧೯ನೆಯ ದಿನಾಂಕ ಭಾನುವಾರಕ್ಕೆ ಸರಿಯಾಗುವುದೆಂದು ಎಂ.ಗೋವಿಂದ ಪೈ ಅವರು ಲೆಕ್ಕಮಾಡಿ ನಿರ್ಧರಿಸಿದ್ದಾರೆ.

ಪೈ ಯವರ ಕಾಲನಿರ್ಣಯದ ಗಣಿತ ಸಾಕಷ್ಟು ವಿವರಗಳನ್ನು ಒಳ-ಗೊಂಡಿದ್ದರೂ ಅವರು ಆ ಗಣಿತದ ಮೂಲಕ ಸಿದ್ಧಮಾಡುವ ಆದಿಪುರಾಣದ ರಚನಾಕಾಲ ಖಚಿತವಾಗಿರುವಂತೆ ತೋರಿದರೂ ಅವು "ಸ್ವಾಮಿಕಣ್ಣು ಪಿಳ್ಳೆ"ಯವರ ಕಾಲ ನಿರ್ಧಾರಕ ಕೋಷ್ಟಕಗಳ ಸಹಾಯದಿಂದ ಮಾಡಲಾಗುವ ಗಣಿತ ಮತ್ತು ಆ ಗಣಿತದಿಂದ ಸಿದ್ಧವಾಗುವ ಕ್ರಿ.ಶ.ತೇದಿಗಳಿಗೆ, ವಿವರಗಳಿಗೆ ಸರಿಹೊಂದುವುದಿಲ್ಲ. ಪಿಳ್ಳೆಯವರ ಕೋಷ್ಟಕ ಪ್ರಕಾರ ಪಂಪನು ಕೊಡುವ ಶಕವರ್ಷ ತೇದಿಯ ಎಲ್ಲ ವಿವರಗಳು ಕ್ರಿ.ಶ.೯೪೧ರ ಅಕ್ಟೋಬರ್ ೨೭ನೆಯ ತಾರೀಖಿಗೆ ಸರಿಯಾಗುವುದೆಂದು, ಆದರೆ ವಾರದಮಟ್ಟಿಗೆ ಅಂದು ಭಾನುವಾಗಿರದೆ ಬುಧವಾರವಾಗಿತ್ತೆಂಬ ಒಂದು ವ್ಯತ್ಯಾಸ ಕಾಣಿಸುವುದೆಂದು ಇದಕ್ಕೆ ಸಮಾಧಾನ ಕಂಡುಕೊಳ್ಳುವುದು ಕಷ್ಟವೆಂದು ಒಂದು ಅಭಿಪ್ರಾಯವಾಗಿದೆ. ಈ ಸಂದಿಗ್ಧತೆಯಿಂದಾಗಿ ಇಲ್ಲಿ ರೈಸ್ ಆರ್.ನರಸಿಂಹಾಚಾರ್ ಮೊದಲಾದವರು ಗ್ರಹಿಸುವಂತೆ ಆದಿಪುರಾಣ ರಚನಾಕಾಲವನ್ನು ಕ್ರಿ.ಶ.೯೪೧ ಎಂದು ತಾತ್ಕಾಲಿಕವಾಗಿ ಇಟ್ಟುಕೊಂಡಿದೆ.

ಆದಿಪುರಾಣದ ರಚನಾಕಾಲದ ಈ ದಿನದಿಂದ ಹಿಂದಕ್ಕೆ ಲೆಕ್ಕಹಾಕಿದರೆ ಪಂಪನ ಜನ್ಮಸಂವತ್ಸರವಾದ ದುಂದುಭಿಯ ಶಾಲಿವಾಹನ ಶಕೆ ೮೨೪ರಲ್ಲಿ ಬರುವುದಾಗಿದ್ದು ಇದು ಕ್ರಿ.ಶ.೯೦೨ ಮತ್ತು ೯೦೩ಕ್ಕೆ ಸಲ್ಲುತ್ತದೆ. ಅಂದರೆ ಆದಿಪುರಾಣವನ್ನು ಬರೆಯುವ ಕಾಲಕ್ಕೆ ಪಂಪನಿಗೆ ೩೯ ವರ್ಷ ವಯಸ್ಸಾಗಿತ್ತು ಎಂಬುದು ತಿಳಿದುಬರುತ್ತದೆ. ಆದರೆ ಪಂಪಭಾರತ ರಚನಾಕಾಲವನ್ನು ಕವಿ ಆ ಕೃತಿಯಲ್ಲಿ ಹೇಳಿಲ್ಲ. ಅಲ್ಲಿ ಭಾರತ ಮತ್ತು ಆದಿಪುರಾಣಗಳನ್ನು ೬ ತಿಂಗಳಲ್ಲಿ ಒಂದು, ೨ ತಿಂಗಳಲ್ಲಿ ಇನ್ನೊಂದನ್ನು ಬರೆದು ಮುಗಿಸಿದಂತೆ ಹೇಳಿದ್ದಾನೆ.

ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ ಸಮಸ್ತ ಭೂ
ತಳಕೆ ಸಮಸ್ತ ಭಾರತಮುಮಾದಿಪುರಾಣಮುಮೆಂದು ಮೆಯ್ಯಸುಂ
ಗೊಳುತಿರೆ ಪೂಣ್ದುಪೂಣ್ದ ತೆಱದೊಂದಱುದಿಂಗಳೊಳೊಂದು ಮೂಱುತಿಂ
ಗಳೊಳೆ ಸಮಾಪ್ತಿಯಾದುದೆನೆ ಬಣ್ಣಿಸಿದಂ ಕವಿತಾಗುಣಾರ್ಣವಂ

ಇತ್ತೀಚೆಗೆ ದೊರೆತ ಪಂಪನ ಆಶ್ರಯದಾತನಾದ ಇಮ್ಮಡಿ ಅರಿಕೇಸರಿಯ ಕಾಲದ ಒಂದು ಶಾಸನದಲ್ಲಿ ಪಂಪಭಾರತದ ೫ ಪದ್ಯಗಳಿವೆ. ಇದರ ಕಾಲಶಕವರ್ಷ ೮೬೯ನೆಯ ಪರಾಭವ ಸಂವತ್ಸರದ ಕಾರ್ತಿಕ ಬಹುಳ ಏಕಾದಶಿ ಸೋಮವಾರ ಎಂದಿದೆ. ಈ ಕಾಲವು ಕ್ರಿ.ಶ.೯೪೭ಕ್ಕೆ ಹೊಂದುತ್ತದೆ. ಆದ್ದರಿಂದ ಪಂಪಭಾರತ ೯೪೬ಕ್ಕೆ ಮೊದಲು ರಚಿತವಾಗಿದ್ದಿರಬಹುದು. ಹಾಗೆಯೇ ಬೆಳಗುವೆನಿಲ್ಲಿ ಎಂಬ ಪದ್ಯದ ಆಧಾರದ ಮೇಲೆ ಹಾಗೂ ಮೇಲಿನ ಶಾಸನದ ಆಧಾರದ ಮೇಲೆ ೯೪೧ರಲ್ಲಿ ಆದಿಪುರಾಣವನ್ನು, ಕ್ರಿ.ಶ. ೯೪೨ರಲ್ಲಿ ಪಂಪಭಾರತವನ್ನು ರಚಿಸಿರಬಹುದೆಂದು ಹೇಳಬಹುದಾಗಿದೆ. ಆದರೆ ಈ ಎರಡೂ ಗ್ರಂಥಗಳ ರಚನೆಯಲ್ಲಿ ಕೆಲವು ವರ್ಷದ ಅಂತರವಿದೆ ಎಂದು ತೀನಂಶ್ರೀ, ಡಿ.ಎಲ್.ಎನ್. ಮೊದಲಾದವರು ಅಭಿಪ್ರಾಯ-ಪಡುತ್ತಾರೆ.

**ಪಂಪನ ವಂಶ ವಿವರ**

ಕವಿಯ ವಂಶವಿವರಗಳನ್ನು ತಿಳಿಯಲು ಆತನ ೨ ಕೃತಿಗಳು ಹಾಗೂ ಪಂಪನ ತಮ್ಮ ಜಿನವಲ್ಲಭನ ಕುರ್ಕ್ಯಾಲ ಶಾಸನವನ್ನು ಆಧಾರವಾಗಿಟ್ಟುಕೊಳ್ಳಬೇಕಾಗಿದೆ. ಆದಿ-ಪುರಾಣದಲ್ಲಿ ಪಂಪನ ವಂಶವಿವರಗಳೇನೂ ಸಿಗುವುದಿಲ್ಲ. ಆದರೆ ಪಂಪನ ಗೋತ್ರ ವತ್ಸಗೋತ್ರ ಎಂಬುದನ್ನು ತಿಳಿಸುವ 'ವತ್ಸಕುಲತಿಲಕನ್' ಎಂಬ ಮಾತು ಮಾತ್ರ ಕಂಡುಬರುತ್ತದೆ. ಇನ್ನು ಪಂಪಭಾರತದ ೧೪ನೆಯ ಆಶ್ವಾಸದ ೪೦-೪೮ರವರೆಗಿನ ಪದ್ಯಗಳಲ್ಲಿ ತನ್ನ ವಂಶವಿವರವನ್ನು ಕೊಟ್ಟಿದ್ದಾನೆ. ಕುರ್ಕ್ಯಾಲ ಶಾಸನದಲ್ಲಿ ಜಿನವಲ್ಲಭ

ತನ್ನನ್ನು ಪಂಪನ ತಮ್ಮನೆಂದೂ, ತನ್ನ ತಂದೆತಾಯಿ ಭೀಮಪ್ಪಯ್ಯ, ಅಬ್ಬಣಾಂಬೆ ಎಂದು ಹೇಳಿಕೊಂಡಿದ್ದಾನೆ. ಈಗ ಈ ಮೂರು ಆಕರಗಳ ಆಧಾರದ ಮೇಲೆ ಪಂಪನ ವಂಶವಿವರಗಳನ್ನು ಹೀಗೆ ಹೇಳಬಹುದು. ಪಂಪನ ಪೂರ್ವಿಕರು ವೆಂಗಿಮಂಡಲ/ ವೆಂಗಿನಾಡು ಪ್ರಾಂತ್ಯದವರು. ತಾಯಿ ಕಡೆಯವರು ಬೆಳ್ವೊಲ ಪ್ರಾಂತ್ಯದವರು. ಮೂಲತಃ ಇವರು ವೆಂಗಿಪಳು ಅಥವಾ ವೆಂಗಿಪುರ ಎಂಬ ಅಗ್ರಹಾರಕ್ಕೆ ಸೇರಿದವರು. ಕಾವ್ಯ ಬ್ರಾಹ್ಮಣರು, ವತ್ಸಗೋತ್ರದವರು. ಇವರು ವಿದ್ಯಾವಂತರು, ಸ್ಥಿತಿವಂತರು, ಉದಾರಿಗಳಾಗಿದ್ದು ವೆಂಗಿನಾಡಿನ ಸಪ್ತಗ್ರಾಮಗಳಲ್ಲಿ ತಮ್ಮ ವೈದಿಕ ಕೆಲಸಕಾರ್ಯಗಳಿಂದ ಪ್ರಸಿದ್ಧರಾಗಿದ್ದರು.

ಮಾಧವ ಸೋಮಯಾಜಿ ಮನೆತನದ ಹಿರಿಯರಾಗಿದ್ದು ಪರಮ ವೈದಿಕರಾಗಿ ಅನೇಕ ಶಾಸ್ತ್ರಗಳಲ್ಲಿ ಪಂಡಿತರಾಗಿದ್ದರು. ಈತನ ಮಗ ಅಭಿಮಾನಚಂದ್ರ. ಒಳ್ಳೆಯ ಉದಾರಿ. ಇವನ ಮಗ ಕೊಮಾರಯ್ಯ ಅಥವಾ ಕುಮಾರಯ್ಯ. ಈತ ವೇದ ವೇದಾಂಗಗಳನ್ನು ಚೆನ್ನಾಗಿ ಅಭ್ಯಾಸಮಾಡಿದ್ದನು. ಇವನ ಮಗ ಭೀಮ ಅಥವಾ ಭೀಮಪ್ಪಯ್ಯ. ಈತನಿಗೆ ಬಾಳ್ವೊಲದ ಅಣ್ಣಿಗೇರಿಯ ಜೋಯಿಸನಾದ ಸಿಂಗನ ಮೊಮ್ಮಗಳು ಅಬ್ಬಣಾಂಬೆ ಪತ್ನಿಯಾಗಿದ್ದಳು. ಭೀಮನು ಕುಲದಲ್ಲಿ ಮೇಲಾದ ಬ್ರಾಹ್ಮಣಕುಲಕ್ಕೆ ಒಪ್ಪುವ ಧರ್ಮದಿಂದಲೇ ಜೈನಧರ್ಮ ಎಂದು ನಂಬಿ ಆ ಧರ್ಮಕ್ಕೆ ಸೇರಿಕೊಂಡನು. ಈ ದಂಪತಿಗಳ ಮಕ್ಕಳೇ ಪಂಪ ಮತ್ತು ಜಿನವಲ್ಲಭರು. ಜಿನವಲ್ಲಭ ಪಂಪನ ತಮ್ಮ, ದೇವೇಂದ್ರಮುನಿ ಪಂಪನ ಗುರು. ಆದಿಪುರಾಣದಲ್ಲಿ ಪಂಪನೇ ಹೇಳಿಕೊಂಡಿದ್ದಾನೆ. ಆದರೆ ಕೆಲವು ಜಿನವಲ್ಲಭನ ಶಾಸನದಲ್ಲಿ ಉಕ್ತನಾಗಿರುವ ಜಯನಂದಿಯನ್ನು ಪಂಪ, ಜಿನವಲ್ಲಭರಹುದು ಎಂದು ಊಹಿಸಿದ್ದಾರೆ.

**ದೇಶ ಮತ್ತು ಆಶ್ರಯ:** ತನ್ನ ಕೃತಿರಚನೆಯ ಕಾಲಕ್ಕೆ ಪಂಪವೇಮುಲವಾಡದ ಚಾಲುಕ್ಯವಂಶದ ಅರಸನಾದ ಇಮ್ಮಡಿ ಅರಿಕೇಸರಿಯ ಆಶ್ರಯದಲ್ಲಿದ್ದನು. ನಂತರ ತನ್ನ ಬದುಕಿನ ಅವಧಿಯನ್ನು ಅರಿಕೇಸರಿ ತನಗೆ ದತ್ತವಾಗಿ ನೀಡಿದ ಧರ್ಮಪುರದಲ್ಲಿ ತಳೆದಿದ್ದಿರಬಹುದು. ಪಂಪ ತನ್ನ ಕಾವ್ಯದಲ್ಲಿ ಬನವಾಸಿ ನಾಡಿನ ವರ್ಣನೆಯನ್ನು ಮನದುಂಬಿ ಮಾಡಿದ್ದಾನೆ ಹಾಗೂ ಈತನ ತಾಯಿ ಅಣ್ಣಿಗೇರಿಯವಳು ಎಂಬುದು ಖಚಿತವಾಗಿರುವುದರಿಂದ ಪಂಪನ ಬಾಲ್ಯ, ಯೌವ್ವನ, ವಿದ್ಯಾಭ್ಯಾಸ ಈ ಭಾಗಗಳಲ್ಲಿ ಕಳೆದಿದೆ ನಡೆದಿದೆ ಎಂದು ಹೇಳಬಹುದಾಗಿದೆ.

ಚಾರಿತ್ರಿಕವಾದ ಹಿನ್ನೆಲೆಯಲ್ಲಿ ಗಂಗರು, ಚಾಲುಕ್ಯರೊಂದಿಗಿನ ವಿಜಯ ಕಂಡುಬರುತ್ತದೆ. ಸಾಮಾಜಿಕ ಮತ್ತು ಧಾರ್ಮಿಕ ಹಿನ್ನೆಲೆಯಲ್ಲಿ ಸ್ವಾಮಿಭಕ್ತಿ, ದೇಶಭಕ್ತಿ, ತಿಂಕವಾಳಿ, ಜೋಳವಾಳಿ, ವೇಳೆವಾಳಿ, ತುರುಗೋಳ್ ಕಂಡುಬರುತ್ತದೆ.

**ಪೆಣ್ಬುಯಲ್:** ಸ್ತ್ರೀಯರ ಮಾನಸಂರಕ್ಷಣೆಗಾಗಿ ಹೋರಾಟ ನಡೆಸುವುದು ಮತ್ತು ಸತಿಸಹಗಮನದ ಪ್ರತೀಕವಾಗಿ ಮಾಸ್ತಿಕಲ್ಲುಗಳು ಕಂಡುಬರುತ್ತವೆ. ಇದಲ್ಲದೇ ಶೂರರನ್ನು ಸನ್ಮಾನಿಸುವ ಪದ್ಧತಿ, ಕುಲಪ್ರಜ್ಞೆ ಕಂಡುಬರುತ್ತದೆ.

ಇದಲ್ಲದೇ ಅವನ ಕಾಲದಲ್ಲಿ ವಿದ್ಯಾಭ್ಯಾಸಕ್ಕಿದ್ದ ಪ್ರೋತ್ಸಾಹ, ಸಾಹಿತ್ಯ ರಚನೆಗಿದ್ದ ವಾತಾವರಣ, ಧಾರ್ಮಿಕ ಪಂಥಗಳು, ಜೈನಕವಿಗಳ ಧರ್ಮಶ್ರದ್ಧೆ ಮತ್ತು ಸಾಹಿತ್ಯ ಸಾಧನೆಯ ಹೆದ್ದಾರಿಗಳು. ಈ ಎಲ್ಲದರ ಹಿನ್ನೆಲೆಯಲ್ಲಿ ಅವನು ತನ್ನ ಕೃತಿರಚನೆ ಮಾಡಿದ್ದಾನೆ.

**ವ್ಯಕ್ತಿಚಿತ್ರ:**

ನಾಡೋಜ ಪಂಪ ಹತ್ತನೇ ಶತಮಾನದ ಕವಿ. ಆಗಿನ ಕಾಲದಲ್ಲಿ ಪುರಾಣ, ಕಾವ್ಯಗಳು ಸಾಮಾನ್ಯ ಜನರ ಕಿವಿಗೂ ಬೀಳುತ್ತಿರಲಿಲ್ಲ. ಅದೇನಿದ್ದರೂ ರಾಜಾಸ್ಥಾನಗಳಲ್ಲಿ ಮಾತ್ರ ಆಶ್ರಯ ಪಡೆದಿದ್ದವು. ಜೈನನಾದ ಪಂಪ ಹಿಂದೂ ದೊರೆ ೨ನೆಯ ಅರಿಕೇಸರಿಯ ಆಸ್ಥಾನದ ಕವಿ ಹಾಗೂ ಯೋಧ. ಪಂಪನ ತಂದೆ ಅಭಿರಾಮದೇವ ತಾಯಿ ಅಣ್ಣಿಗೇರಿಯ ಅಬ್ಬಲಬ್ಬೆ. ಮೊದಲಿಗೆ ಬ್ರಾಹ್ಮಣರಾಗಿದ್ದರೂ ಕ್ರಮೇಣ ಜೈನ ಧರ್ಮಕ್ಕೆ ಸೇರಿದವರು. ಮೂಲತಃ ಕರ್ನಾಟಕದಿಂದ ತೆಲುಗುನಾಡಿಗೆ ವಲಸೆ ಹೋದ ಕನ್ನಡಿಗರು. ಇಷ್ಟಾದರೂ ಪಶ್ಚಿಮ ಘಟ್ಟದ ಬನವಾಸಿ ಅವನನ್ನು ಸೆಳೆದು ಆರಂಕುಶ–ಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ ಮತ್ತು ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ಬನವಾಸಿ ದೇಶದೊಳ್ ಎಂದು ಅಭಿಮಾನ ಪಟ್ಟವನು. ಜೈನಧರ್ಮದಲ್ಲಿ ಕೊನೆಯ ಜನ್ಮ ಮನುಷ್ಯ ಜನ್ಮ ಆಗಬೇಕಿದ್ದರೂ ಆ ತತ್ತ್ವ ಮೀರುವ ವಿಷಯವಾದ ಮರಿದುಂಬಿಯಾಗಿ ಮೇಣ ಕೋಗಿಲೆ ಆಗಬೇಕೆಂದು ಮಾನವೀಯ ನೆಲೆಯಲ್ಲಿ ಹಂಬಲಿಸಿದ್ದಾನೆ.

ಆದಿಕವಿ ಪಂಪ ಬರೆದುದು ಎರಡು ಕಾವ್ಯಗಳನ್ನು : ಒಂದು ವಿಕ್ರಮಾರ್ಜುನ ವಿಜಯವೆಂಬ ಲೌಕಿಕ ಕಾವ್ಯ; ಮತ್ತೊಂದು, ಆದಿಪುರಾಣವೆಂಬ ಆಗಮಿಕ ಕಾವ್ಯ. ಹೀಗೆ ಒಂದು ಲೌಕಿಕ ಕೃತಿಯನ್ನೂ ಒಂದು ಧಾರ್ಮಿಕ ಕೃತಿಯನ್ನೂ ಅವನು ರಚಿಸಿದ್ದು ಕೇವಲ ಆಕಸ್ಮಿಕ ಸಂಗತಿಯೆಂದಾಗಲೀ ಯಾವುದೋ ಸಂಪ್ರದಾಯದ ಪಾಲನೆಗಾಗಿ ಮಾಡಿದ ಕೆಲಸವಲ್ಲ. ಅವನ ಕವಿತಾಶಕ್ತಿ ಇಬ್ಬಗೆಯಾಗಿ ಕವಲೊಡೆದುದಕ್ಕೆ ಕಾರಣವನ್ನು ಅವನ ದ್ವಿಮುಖ ವ್ಯಕ್ತಿತ್ವದಲ್ಲಿ ಅರಸಬೇಕು. ಲೌಕಿಕ, ಧಾರ್ಮಿಕಗಳೆರಡನ್ನೂ ಪುರಸ್ಕರಿಸುವ ಸಮನ್ವಯ ಮನೋಧರ್ಮ ಪಂಪನದು. ಅದರ ಸುಮಧುರ ಫಲಗಳೇ ಪಂಪ ಭಾರತ ಮತ್ತು ಆದಿಪುರಾಣ. ಈ ಕೃತಿಗಳ ಪ್ರಧಾನ ಮೌಲ್ಯಗಳು

ವ್ಯಾಸಭಾರತದಿಂದ ಮತ್ತು ಜಿನಸೇನಾಚಾರ್ಯರ ಪೂರ್ವಪುರಾಣ-ದಿಂದ ಬಂದವಾದರೂ, ಅವು ಪಂಪನಿಂದ ಪುನರನುಭವಗೊಂಡು, ಅವನ ಸ್ವಂತ ಕಾಣ್ಕೆಯಲ್ಲಿ ಪುಟಗೊಂಡು ಕನ್ನಡ ಸಾಹಿತ್ಯಕ್ಕೆ ಪ್ರವಹಿಸಿವೆ; ಆ ಪುನರನುಭವದಿಂದಲೆ ಪಂಪನ ಕಾವ್ಯಗಳು ಮೂಲಕೃತಿಗಳ ಪುನರ್ಭವವಾಗಿವೆ, ಕೇವಲ ಪ್ರತಿಕೃತಿಯಾಗಿಲ್ಲ.

ಪಂಪ 'ಅರಿವಂ ಪೊಸಯಿಸುವುದು ಧರ್ಮಂ' ಎಂದು ಆದಿಪುರಾಣದಲ್ಲಿ ಸಾರಿದ್ದಾನೆ. ಯಾವುದು ಅರಿವನ್ನು ಹೊಸತು ಮಾಡುತ್ತದೆಯೋ ಅದೇ ಧರ್ಮ ಎನ್ನುವುದು ಕವಿ ಹೇಳುವ ಮಾತು. ಜಗತ್ತನ್ನು ಎಲ್ಲರೂ ಕಂಡ ಹಾಗಲ್ಲದೆ ಹೊಸದಾಗಿ ಅನುಭವಿಸಿ ಕಂಡು ಹೇಳುವವನು ಕವಿ. ಧರ್ಮ ಎಂದರೆ ಆಚರಣೆಗಳು ಮಾತ್ರ, ಧರ್ಮವೆಂದರೆ ಗುರುಗಳೆಂದು ಭಾವಿಸಿದವರು ಹೇಳಿದನ್ನು ಪ್ರಶ್ನಿಸದೆ ಪರಿಪಾಲಿಸುವುದು ಮಾತ್ರ ಅಂದುಕೊಂಡ ಮನಸ್ಸು ಮಾತ್ರ ಜಡವಾಗಿ ಯೋಚಿಸಲು ಸಾಧ್ಯ. ಧರ್ಮ ಎನ್ನುವುದು ನಿರಂತರವಾಗಿ ಚಲನಶೀಲವಾಗಿರಬೇಕು. ಲೌಕಿಕ, ಧಾರ್ಮಿಕಗಳೆರಡನ್ನೂ ಪುರಸ್ಕರಿಸುವ ಸಮನ್ವಯ ಮನೋಧರ್ಮ ಪಂಪನದು. ಪಂಪನ ಈ ಸಮನ್ವಯ ದೃಷ್ಟಿ ಕೇವಲ ವೈಯಕ್ತಿಕವಾದುದಲ್ಲ. ನಿಜವಾದ ಭಾರತೀಯ ದೃಷ್ಟಿಯನ್ನು ಪಂಪ ಪ್ರತಿನಿಧಿಸಿದ್ದಾನೆ. ಲೌಕಿಕ ಪಾರಲೌಕಿಕಗಳ ಸಾಮರಸ್ಯವೇ ಭಾರತೀಯ ಜೀವನದ ತಿರುಳು. ಧರ್ಮ ಮೋಕ್ಷಗಳೇ ಬದುಕಿನ ಪರಮ ಗಂತವ್ಯ. ಅವಕ್ಕೆ ಸೋಪಾನವಾಗಿ ಅರ್ಥ ಕಾಮಗಳನ್ನು ಆಚರಿಸಬೇಕು. ಇಹವನ್ನು ತೊರೆಯ-ದಿದ್ದರೂ ಪರವನ್ನು ಮರೆಯಬಾರದು. ಲೌಕಿಕಕ್ಕೆ ಬೆಲೆಯನ್ನು ಕೊಟ್ಟರೂ ಅದನ್ನು ಬಲೆಯಾಗಿ ಮಾಡಿಕೊಳ್ಳದೆ ಪರಮಾರ್ಥವನ್ನು ಕಡೆಯ ನೆಲೆಯಾಗಿ ಮಾಡಿಕೊಳ್ಳಬೇಕು; ಏಕೆಂದರೆ, ಇಹಜೀವನದ ಸುಖ ಸೌಭಾಗ್ಯಗಳು ಎಷ್ಟೇ ಸವಿಯಾಗಿ ತೋರಿಬಂದರೂ, ಅವು ಕ್ಷಣಭಂಗುರ, ಪರಿಮಿತ – ಆದ್ದರಿಂದಲೇ ಅಸಾರವೂ ಹೌದು; ಇವುಗಳನ್ನು ಮೀರಿದ ಅತೀಂದ್ರಿಯ ಸುಖವೊಂದಿದೆ – ಅದು ಅಕ್ಷಯವಾದುದು, ಚಿರವಾದುದು, ಪರಮ ಸ್ವಾದುವಾದುದು; ಅದನ್ನು ಜೀವ ಪಡೆದುಕೊಳ್ಳಬೇಕು ಎಂಬುದು ಭಾರತೀಯರ ದೃಢವಾದ ನಿಲುವು.

ಇಂಥ ಸಾರ್ಥಕವಾದ ನಿಲುವನ್ನು ಪಂಪ ಆದಿಪುರಾಣದಲ್ಲಿ ಪ್ರದರ್ಶಿಸಿದ್ದಾನೆ. ಜೈನಧರ್ಮೀಯ ಕೃತಿಯಾದರೂ ಭಾರತೀಯ ಮನೋಭಾವವನ್ನು ಎತ್ತಿಹಿಡಿಯುತ್ತದೆ. "ಸಂಸಾರದೊಳ್ ಸಾರಮಪ್ಪುದಱಿಂ ಧಮಧಮದಂ ನಿಮಿರ್ಚುವುದಱಿಂ ಸಂಸಾರ-ಸಾರೋದಯಂ" ಭವದ ಜಂಜಡದಲ್ಲಿ ಜೀವ ತೊಡಗಲೇ ಬಾರದು; ಒಂದು ವೇಳೆ ತೊಡಗಿದರೂ ಅದರಿಂದ ಬೇಗ ಬಿಡುಗಡೆಗೊಂಡು ವಿರಕ್ತಿ ಹೊಂದಿ ಉದ್ಧಾರದತ್ತ ಹೊರಳಬೇಕು. ಹಾಗೆ ಹೊರಳಿದ ಚೇತನವೊಂದರ ಕಥೆ ಆದಿಪುರಾಣ. ಆತ್ಮನ

ಊರ್ಧ್ವಯಾತ್ರೆಯ ಬೃಹದ್‌ಗಾನವನ್ನು, ಸಂಸಾರ ನಿರಸನದ ಮಹಾ ಪ್ರಗಾಥವನ್ನು ಪಂಪ ಮಹಾಕವಿ ಭುವನ ಸಮಸ್ತವೂ ಮೆಚ್ಚುವಂತೆ ರಚಿಸಿದ್ದಾನೆ. ವಿಷಯಸುಖ ನಿಮಗ್ನವಾದ ಜೀವವೊಂದು ಕ್ರಮೇಣ ಎಚ್ಚತ್ತು, ಪರಿಪಾಕಗೊಂಡು ಸಮ್ಯಕ್ತ್ವ ನಿಷ್ಠೆಯಿಂದ ತೀರ್ಥಂಕರತ್ವಕ್ಕೇರಿದ ಮಹದಾಶ್ಚರ್ಯವನ್ನು ಇಲ್ಲಿ ಕಾಣುತ್ತೇವೆ. ಭವಾಸಕ್ತವಾದ ಚೇತನ ಉದ್ಧಾರೋನ್ಮುಖವಾಗಬೇಕಾದರೆ ಇಹದ ಸುಖ ಭೋಗಗಳ ಅಸಾರತೆ ಮತ್ತು ಅನಿತ್ಯತೆ ಅದಕ್ಕೆ ಅರಿವಾಗಿ ವೈರಾಗ್ಯ ಕಾಲೂರಬೇಕು. ಭರತ-ಬಾಹುಬಲಿಗಳ ಕತೆಯಲ್ಲಿ ಕೀರ್ತಿ, ವೈಭವಗಳ ವೈಫಲ್ಯವನ್ನು ಸಮರ್ಥಿಸಿ ಅಹಂಕಾರ ವಿಮುಖತೆಯನ್ನು ಪ್ರಚೋದಿಸುತ್ತಾನೆ. ಆದಿಪುರಾಣದಲ್ಲಿ ವೈರಾಗ್ಯ ಅಥವಾ ಧರ್ಮದ ಪ್ರಸಕ್ತಿ ಬರಿಯ ಶುಷ್ಕೋಪದೇಶವಾಗಿ ಬಂದಿಲ್ಲ. ರಸಾರ್ದ್ರವಾದ ಕಲೆಯಾಗಿ ಮೈದೋರಿದೆ. ಮಹೋನ್ನತವಾದ, ಭೂಮವಾದ ಜೀವನ ದರ್ಶನವಿದೆ. ಕವಿ ಆತ್ಮಯಾತ್ರೆಯ ಅದ್ಭುತ ಚಿತ್ರಗಳನ್ನು ಸುರುಳಿ ಸುರುಳಿಯಾಗಿ ತೆರೆದಿರಿಸಿದ್ದಾನೆ. 'ನೆಗಟ್ದಿ ಆದಿಪುರಾಣದೊಳಜಿವುದು ಕಾವ್ಯಧರ್ಮಮಂ ಧರ್ಮಮುಮಂ' ಎಂದು ಪಂಪನೆ ಹೇಳಿಕೊಂಡಿದ್ದಾನೆ. ಕಾವ್ಯಧರ್ಮ-ಧರ್ಮಗಳ ಮಧುರ ಸಮನ್ವಯ ಇಲ್ಲಿ ದಿಟವಾಗಿಯೂ ಸಾಧಿತವಾಗಿದೆ.

ಪಂಪ ತನ್ನ ವರ್ಣನೆಯನ್ನು ಆದಿಪುರಾಣದ ಮೊದಲ ಆಶ್ವಾಸದ ೨೯ನೆಯ ಪದ್ಯದಲ್ಲಿ ವರ್ಣಿಸಿಕೊಂಡಿದ್ದಾನೆ. ಇದರ ಪ್ರಕಾರ ಈತ ಬಾಳೆಯ ಹೂವಿನ ಮೇಕೆಯಂತೆ ಕಪ್ಪು ಕೆಂಪು ಮಿಶ್ರವಾದ ಮೈಬಣ್ಣದವನು. ಗುಂಗುರು ಕೂದಲುಳ್ಳವನು, ತಾವರೆಯಂತ ಮುಖವುಳ್ಳವನು, ಸುಕುಮಾರ ದೇಹದವನು, ಹಿತಮಿತಮೃದುವಚನ, ಸುಂದರ ವೇಷಭೂಷಣಗಳಿಂದ ಕಂಗೊಳಿಸುತ್ತಿದ್ದನೆಂದು ತಿಳಿದುಬರುತ್ತದೆ. ನಂತರ ಇವನ ಬಾಲ್ಯದ ದಿನಗಳು ವಿದ್ಯಾಭ್ಯಾಸ ಯಾವ ತೊಡರಿಲ್ಲದೇ ನಡೆದಂತೆ ಕಾವ್ಯಗಳಲ್ಲಿ ಕಂಡುಬರುವ ಸುಖಕರವಾದ ಅನೇಕ ಚಿತ್ರಗಳಿಂದ ತಿಳಿದುಬರುತ್ತದೆ. ಈತ ಆಗಮಿಕ ಮತ್ತು ಲೌಕಿಕ ವಿದ್ಯೆಗಳೆರಡರಲ್ಲೂ ಪರಿಣಿತಿಯನ್ನು ಪಡೆದುಕೊಂಡಿದ್ದ. ಸಂಸ್ಕೃತ ಕಾವ್ಯನಾಟಕಗಳ ಪರಿಚಯವಿದ್ದಂತೆ. ಕೌಟಿಲ್ಯನ ಅರ್ಥಶಾಸ್ತ್ರ, ಶಾಲಿಹೋತ್ರನ ಅರವಶಾಸ್ತ್ರ, ಪಾಲಕಾಪ್ಯನ ಗಜಶಾಸ್ತ್ರ ಇಂತಹ ಶಾಸ್ತ್ರಗಳಲ್ಲೂ ಪರಿಣತಿಯನ್ನು ಹೊಂದಿದವನಾಗಿದ್ದ. ಹಾಗೆಯೇ ಸಂಗೀತ, ನೃತ್ಯ, ಶಿಲ್ಪ, ಚಿತ್ರ, ವೈದ್ಯ, ರಾಜನೀತಿ, ಕಾಮಶಾಸ್ತ್ರ ಇಂತಹ ಕಲೆಗಳಲ್ಲಿ ಆಸಕ್ತಿ ಇತ್ತೆಂದು ಡಿ.ಎಲ್.ನರಸಿಂಹಾಚಾರ್ ಅಭಿಪ್ರಾಯಪಡುತ್ತಾರೆ. ಹೀಗೆ ಕವಿ ಪಂಪನ ವಿದ್ವತ್ತು, ಪಾಂಡಿತ್ಯ ಅತಿಶಯವಾದುದು ಎನ್ನುವುದರಲ್ಲಿ ಸಂಶಯವಿಲ್ಲ.

ಪಂಪನ ನಂತರದ ಕವಿಗಳು ಪಂಪನನ್ನು ಮನದುಂಬಿ ಹೊಗಳಿದ್ದಾರೆ, ಸ್ಮರಿಸಿದ್ದಾರೆ. ರನ್ನ, ದುರ್ಗಸಿಂಹ, ಇಮ್ಮಡಿ ನಾಗವರ್ಮ, ನಾಗಚಂದ್ರ, ನಯಸೇನ, ಕರ್ಣಪಾರ್ಯ, ರುದ್ರಭಟ್ಟ, ಅಗ್ಗಳ, ಬ್ರಹ್ಮಶಿವ, ಪಾರ್ಶ್ವಪಂಡಿತ, ಇಮ್ಮಡಿ ಗುಣವರ್ಮ, ಕಮಲಭವ, ಮಲ್ಲಿಕಾರ್ಜುನ, ಚಾಂಡರಸ, ನಾಗರಾಜ, ಬಾಹುಬಲಿ ಪಂಡಿತ, ಮಧುರ, ದೇವಪ್ಪ, ಶಿಶುಮಾಯಣ ಪದ್ಮಕವಿ, ಹಿರಣ್ಯಗರ್ಭ ಇವರೇ ಮೊದಲಾದವರು ಪಂಪನನ್ನು ಸ್ಮರಿಸಿ ಅವನ ಕಾವ್ಯಗುಣಗಳು ನಮ್ಮಲ್ಲಿ ನೆಲೆಸಲಿ ಎಂದು ಪ್ರಾರ್ಥಿಸಿದ್ದಾರೆ. ಹಲವರು ಅವನಿಂದ ಪ್ರಭಾವಿತರಾಗಿದ್ದಾರೆ. ರನ್ನನಂತೂ ಪಂಪನಿಗೆ ನೇರಋಣಿ-ಯಾಗಿಯೇ ತನ್ನ ಗದಾಯುದ್ಧವನ್ನು ರಚಿಸಿದ್ದಾನೆ. ಪಂಪನ ಕವಿಪ್ರತಿಭೆಯನ್ನು ಪರಿಚಯಿಸುವ ಮಾತುಗಳಾಗಿವೆ. ಇಂತಹ ಉನ್ನತಕವಿ ನಮ್ಮ ಆದಿಕವಿ, ಆದಿಮಹಾಕವಿ ಎನ್ನುವುದು ಕನ್ನಡಿಗರಿಗೆ ಹೆಮ್ಮೆಯ ಸಂಗತಿ. ಪಂಪನನ್ನು ಕನ್ನಡದ ಕಾಳಿದಾಸ ಎಂದು ತೀ.ನಂ.ಶ್ರೀ.ಯವರು ಹೇಳಿದ್ದಾರೆ. ನಾಡೋಜನಾದ ಪಂಪನು ಬರಿಯ ಕವಿ ಮಾತ್ರವೇ ಅಲ್ಲ. ಸಾವಿರ ವರ್ಷಕ್ಕೆ ಹಿಂದಿನ ಕನ್ನಡ ರಾಷ್ಟ್ರೀಯ ಪುರುಷರೊಳು ಒಬ್ಬನು ಎಂದು ಮುಳಿಯತಿಮ್ಮಪ್ಪಯ್ಯನವರು ಹೇಳಿದ್ದಾರೆ.

**ಪಂಪಕವಿಯ ಆದಿಪುರಾಣದ ಸ್ಥೂಲ ಪರಿಚಯ:**

ಆದಿಪುರಾಣ ಕನ್ನಡದಲ್ಲಿ ಉಪಲಬ್ಧವಾದ ಮೊತ್ತಮೊದಲ ಸಾಹಿತ್ಯಕೃತಿ. ಈ ಮಹಾಕಾವ್ಯವನ್ನು ವಿಶ್ವಕೋಶದ ಮಾದರಿಯ ಕೃತಿ ಎಂದು ಕರೆಯಬಹುದು. ಸಂಸ್ಕೃತದ ಜಿನಸೇನಾಚಾರ್ಯ ಹಾಗೂ ಗುಣಭದ್ರಾಚಾರ್ಯರಿಂದ ರಚಿತವಾಗಿರುವ ಪೂರ್ವಪುರಾಣ ಮತ್ತು ಮಹಾಪುರಾಣವನ್ನು ಅವಲಂಬಿಸಿದ ಪಂಪ ಮೂಲಕೃತಿಗೆ ಬಹುಮಟ್ಟಿಗೆ ನಿಷ್ಠವಾಗಿದ್ದರೂ ಅದನ್ನು ಕಾವ್ಯವಾಗಿ ಪರಿವರ್ತಿಸಿ ದೇಶ-ಕಾಲಗಳ ಪರಿಮಿತಿಯನ್ನು ಮೀರಿದ ಕೃತಿಯಾಗಿಸುವಲ್ಲಿ ಯಶಸ್ವಿಯಾಗಿದ್ದಾನೆ. ಪಾಪಪುಣ್ಯಗಳ ಚಕ್ರದಿಂದ ಹೊರಬಂದಾಗಲೇ ಕರ್ಮಕ್ಷಯ. ಇದೇ ಜೈನಧರ್ಮದ ಕೊನೆಯ ಅವಸ್ಥೆ. ಪ್ರತಿ ಮನುಷ್ಯ ದೇವನಾಗುವ ಸಾಧ್ಯತೆಯನ್ನು ಜೈನಧರ್ಮ ಪ್ರತಿಪಾದಿಸಿದೆ. ಜಿನಸೇನಾಚಾರ್ಯರ ಪೂರ್ವಪುರಾಣವನ್ನು ಆಧರಿಸಿ ಪಂಪ ತನ್ನ ೩೯ನೇ ವಯಸ್ಸಿನಲ್ಲಿ ಆರೇ ತಿಂಗಳಲ್ಲಿ ಬರೆದ ೧೬೩೦ ಪದ್ಯಗಳ ೧೬ ಆಶ್ವಾಸಗಳ ಆದಿಪುರಾಣದಲ್ಲಿ ಆದಿದೇವನ ಭವಾವಳಿಗಳು, ಆದಿದೇವನ ಜನ್ಮ ಹಾಗೂ ಭರತ-ಬಾಹುಬಲಿಯರ ಮೂರು ಮಜಲುಗಳ ಕಥೆಯಿದೆ.

ಆದಿಪುರಾಣವು ಮೊದಲ ತೀರ್ಥಂಕರನಾದ ವೃಷಭನಾಥನ ಮತ್ತು ಅವನ ಮಕ್ಕಳಾದ ಭರತ ಬಾಹುಬಲಿಯರ ಕಥೆಯನ್ನು ನಿರೂಪಿಸುತ್ತದೆ. ಮನುಷ್ಯ ಚೇತನವು

ಪರಿಪೂರ್ಣತೆಯ ಕಡೆಗೆ ಮಾಡುವ ಪಯಣದ ಸಂಕೇತ ಎನ್ನುವಂತೆ, ಆದಿನಾಥನ ಪೂರ್ವಜನ್ಮಗಳ ಭವಾವಳಿಯನ್ನು ವಿವರಿಸಲಾಗಿದೆ. ಆದಿನಾಥನ ಜೀವನದ ಐದು ಮಂಗಳಮಯವಾದ ಪಂಚಕಲ್ಯಾಣಗಳ ವಿವರಣೆಯಿದೆ. ವೃಷಭನಾಥನಿಗೆ ಸುನಂದಾ, ನಂದಾ ಎಂಬಿಬ್ಬರು ಮಡದಿಯರಿಬ್ಬರಿಂದ ನೂರು ಗಂಡು ಮಕ್ಕಳಿದ್ದರು. ಬಾಹುಬಲಿ, ಸುನಂದೆಯ ಮಗ. ಪುರುದೇವನಿಗೆ ವೈರಾಗ್ಯ ಉಂಟಾದಾಗ ಮಕ್ಕಳಿಗೆ ರಾಜ್ಯ ಹಂಚಿ ತಪಕ್ಕೆ ತೆರಳಿದ. ಸಕಲ ಕರ್ಮಗಳನ್ನು ಜಯಿಸಿ ಕೇವಲ ಜ್ಞಾನ ಪಡೆದು ಮುಕ್ತಿ ಮಾರ್ಗವನ್ನು ಉಪದೇಶಿಸುತ್ತಿದ್ದ. ಆದಿನಾಥನ ವೈರಾಗ್ಯೋದಯದ ನಂತರವೂ ಕಥೆ ಮುಂದುವರೆಯುತ್ತದೆ. ಭರತ ಮತ್ತು ಬಾಹುಬಲಿಯರ ಸಂಘರ್ಷವು ಕೇಂದ್ರಸ್ಥಾನವನ್ನು ಪಡೆದುಕೊಳ್ಳುತ್ತದೆ. ಪೂರ್ವಪುರಾಣದ ಕಥಾಗತಿಯನ್ನು ಅನುಸರಿಸಿ ಪಂಪ ತನ್ನ ಆದಿಪುರಾಣದಲ್ಲಿ ಭರತ–ಬಾಹುಬಲಿಯರ ವೃತ್ತಾಂತವನ್ನು ರಚಿಸಿದ್ದಾನೆ. ದಟ್ಟವಾದ ಕಥಾಂಶವಿರುವ ರಸಸ್ಥಾನವಿದು. ಲೌಕಿಕವಾದ ನೆಲೆಗಟ್ಟಿನ ಮೇಲೆ ಬೆಳೆದಿದೆ. ಭಾವನೆಗಳು ಮಾನವ ಸಹವಾದ ಚಿತ್ತವೃತ್ತಿಗಳಿಗೆ ಹೊಂದಿಕೊಂಡು ಅರಳಿವೆ. ಅಣ್ಣ–ತಮ್ಮಂದಿರ ನಡುವೆ ಮುಡಿದ ಮನಸ್ತಾಪವು ಬಾಹುಬಲಿಯ ವಿವೇಕ– ಮಹಾತ್ಯಾಗಗಳ ಫಲವಾಗಿ ಸರಿಹೋಗುತ್ತದೆ.

ವೃಷಭನ ಮಕ್ಕಳಲ್ಲಿ ಭರತ–ಬಾಹುಬಲಿಯರ ಹೆಸರು ಪ್ರಮುಖವಾಗಿ ನಿಲ್ಲುತ್ತದೆ. ಪ್ರಥಮ ಚಕ್ರವರ್ತಿ ಮತ್ತು ಪ್ರಥಮ ರಾಮದೇವರೆಂಬ ಹಿರಿಮೆ ಮಾತ್ರದಿಂದಲೇ ಅವರಿಗೆ ಮನ್ನಣೆ ಸಂದುದಲ್ಲ. ಅದಕ್ಕೂ ಮಿಗಿಲಾಗಿ, ಅಣ್ಣತಮ್ಮಂದಿರಾದ ಅವರು ತಮ್ಮ ನಡುವೆ ಏರ್ಪಟ್ಟ ಮನಸ್ತಾಪ, ವಿರಸಗಳಿಂದ ಹೊರಬಂದ ರೀತಿ, ಲೋಕಕ್ಕೆ ತನ್ಮೂಲಕ ಸಾರಿದ ಲೋಕೋತ್ತರ ಆದರ್ಶ ಇವುಗಳಿಂದಲೂ ಅವರಿಗೆ ಒಂದು ವಿಶಿಷ್ಟ ಸ್ಥಾನಸಂದಿದೆ. ಅತ್ಯಂತ ರೋಚಕವಾದ ಕಥಾಘಟ್ಟಗಳನ್ನೊಳಗೊಂಡ ಈ ಭಾಗ ಆದಿಪುರಾಣದಲ್ಲಿ ಕಾವ್ಯ ಕುಸುರಿಯೊಂದಿಗೆ ಅಭಿವ್ಯಕ್ತಗೊಂಡಿದೆ. ಭರತ, ಬಾಹುಬಲಿಯರ ಕಥೆ ಕಾವ್ಯಕ್ಕೆ ಕಳಸವಿಟ್ಟಂತೆ.

ಪುರುದೇವನಿಗೆ ಜ್ಞಾನೋದಯವಾಗುವ ವೇಳೆಗೆ ಭರತನಿಗೆ ಪುತ್ರೋದಯ–ವಾಯಿತು. ಆ ಆನಂದದಲ್ಲಿ ಮಗ್ನನಾಗಿದ್ದಾಗ ಶಸ್ತ್ರಾಗಾರದಲ್ಲಿ ಹುಟ್ಟಿದ ಚಕ್ರರತ್ನ ಭರತನ ದಿಗ್ವಿಜಯದ ಮಹತ್ವಾಕಾಂಕ್ಷೆಯನ್ನು ಹುರಿದುಂಬಿಸಿತು. ತನ್ನ ಕೀರ್ತಿಯನ್ನು ಅಚಂದ್ರಾರ್ಕವಾಗಿಸಬೇಕೆಂಬ ಆಸೆ ಅವನೆದೆಯನ್ನು ಹಿಡಿದು ಕಾಡಿಸಿತು. ರತ್ನವನ್ನು ಮುಂದಿಟ್ಟುಕೊಂಡು ಪ್ರಪಂಚ ಪರ್ಯಟನ ಮಾಡಿ ದಿಗ್ವಿಜಯ ಸಾಧಿಸಿದ ಭರತ ಆ ಸಾಧನೆಯನ್ನು ತಾನೊಬ್ಬನೇ ಮಾಡಿರುವುದೆಂದು ಬೀಗಿ ವೃಷಭಾಚಲದಲ್ಲಿ ಬರೆಸಲು ಬಂದ. ಇಡಿಕಿರಿದ ವೃಷಭಾಚಲದ ಪ್ರಶಸ್ತಿ ಶಾಸನಗಳನ್ನು ಕಂಡು ನಾಚಿ ನೀರಾದರೂ

ಕೀರ್ತಿಯ ನಶ್ವರತೆ ಮನಸ್ಸಿಗೆ ಉನ್ಮಾರ್ಗವನ್ನು ಬಿಡು ಸನ್ಮಾರ್ಗವನ್ನು ಹಿಡಿ ಎಂದು ಸಾರಿದರೂ ಕೀರ್ತಿ ಶನಿಯಾಗಿ ಅವನನ್ನು ಆವರಿಸಿತು. ಬಾಹ್ಯದ ಯುದ್ಧವನ್ನು ಗೆಲ್ಲುವುದು ಮುಖ್ಯವಲ್ಲ ಅಂತರಂಗದ ಯುದ್ಧವನ್ನು ಗೆಲ್ಲುವುದು ಮುಖ್ಯ ಎನ್ನುವುದರ ಅರಿವು ಮರೆತು ತನ್ನ ಹೆಸರು ದಾಖಲಿಸಿತು. ಮರಳಿ ಪುರಕ್ಕೆ ಪ್ರವೇಶಿಸುವ ಮುನ್ನ ಚಕ್ರರತ್ನ ಮುಂದೆ ಸಾಗಲು ನಿರಾಕರಿಸಿತು. ತಮ್ಮಂದಿರನ್ನು ಗೆಲ್ಲದ ವಿಚಾರ ತಿಳಿಸಿದ. ತಮ್ಮಂದಿರಿಗೆ ಹೇಳಿಕಳುಹಿಸಿದ ಬಾಹುಬಲಿಯನ್ನುಳಿದು ಉಳಿದವರು ತಂದೆಯ ಬಳಿ ದೀಕ್ಷೆ ಪಡೆದರು.

ಆದಿ ತೀರ್ಥಂಕರ ಚರಿತ್ರೆಗಳಲ್ಲಿ ಆದಿ ತೀರ್ಥಂಕರನ ಕಥೆಯೊಂದಿಗೆ ಈ ಭರತ–ಬಾಹುಬಲಿಗಳ ವೃತ್ತಾಂತವೂ ಹೆಣೆದುಕೊಂಡು ಬರುತ್ತದೆ. ಆದಿತೀರ್ಥಂಕರ ಚರಿತ 'ಆದಿಪುರಾಣ'ದ ಒಂದು ಮುಖ್ಯವಾದರೆ, ಭರತ ಚಕ್ರವರ್ತಿ ಚರಿತ ಅದರ ಇನ್ನೊಂದು ಮುಖ; ಎರಡೂ ಪರಸ್ಪರ ಪೂರಕ. ಆದಿನಾಥನದು ಧಾರ್ಮಿಕ ದಿಗ್ವಿಜಯವಾದರೆ, ಅವನ ಹಿರಿಯ ಮಗ ಭರತನದು ಲೌಕಿಕ ದಿಗ್ವಿಜಯ. ಭರತನ ದಿಗ್ವಿಜಯ ಹಾಗೂ ಭರತ–ಬಾಹುಬಲಿಗಳ ವ್ಯಾಯೋಗ ಪ್ರಸಂಗಗಳು ಆದಿಪುರಾಣದ ಸ್ವಾರಸ್ಯವನ್ನು ಹೆಚ್ಚಿಸುವ ಭಾಗಗಳು. ಆದಿನಾಥನ ಕತೆಯಲ್ಲಿ ಕಾಮಭೋಗ ನಿರಸನವಿದ್ದರೆ ಭರತ–ಬಾಹುಬಲಿಗಳ ಕಥೆಯಲ್ಲಿ ಅಹಂಕಾರ ನಿರಸನವಿದೆ. ಒಂದೆಡೆ ಧರ್ಮಕ್ಕೆ ಒಲಿದು ಜನರು ತಲೆಬಾಗುವ ಪ್ರಸಂಗವಿದ್ದರೆ, ಮತ್ತೊಂದೆಡೆ ರಾಜರು ಭರತನಿಗೆ ಹೆದರಿ ಆತನನ್ನು ಒಪ್ಪಿಕೊಳ್ಳುವ, ಯುದ್ಧ ಮಾಡಿದರೂ ಶರಣಾಗುವ ಲೌಕಿಕ ಪ್ರಸಂಗಗಳಿವೆ. ಭರತನ ಬಾಹ್ಯವಿಜಯ ಆದಿದೇವನ ಆತ್ಮವಿಜಯದ ಹಿರಿಮೆಯನ್ನು ವೈಷಮ್ಯತತ್ತ್ವದ ಮೂಲಕ ಬಹಳ ಚೆನ್ನಾಗಿ ಮನವರಿಕೆ ಮಾಡಿಕೊಡುತ್ತದೆ; ಕಡೆಗೆ ಅದೊಂದು ಅಪಸ್ವರವಾಗಿ ಉಳಿಯದೆ, ಕಥೆಯ ಅಲೌಕಿಕ ಸ್ವರಮೇಳದಲ್ಲಿ ಲೀನವಾಗಿ ಸಾಮರಸ್ಯ ಪೋಷಕವಾಗುತ್ತದೆ. ಆದಿ ತೀರ್ಥಂಕರ ಚರಿತೆಯಲ್ಲಿ ಸಂಸಾರದ ಅನಿತ್ಯತೆ ಅಸಾರತೆಗಳು ಧ್ವನಿತವಾದರೆ, ಭರತ ಚಕ್ರಿಯ ಕತೆಯಲ್ಲಿ ಕೀರ್ತಿ, ಪದವಿ, ಪ್ರತಿಷ್ಠೆ, ವಿಭಾವಾದಿಗಳು ಹುರುಳಿಲ್ಲವೆಂಬುದು ವ್ಯಕ್ತವಾಗುತ್ತದೆ. ಅಲ್ಲಿ ವಿಷಯ ತೃಷ್ಣೆಗೆ ಆಘಾತವಾದರೆ ಇಲ್ಲಿ ಅಹಂಕಾರಕ್ಕೆ ಅಪೋಹವೊದಗುತ್ತದೆ. ಕಾಮತ್ಯಾಗ, ಅಹಂಕಾರ, ತ್ಯಾಗ – ಇವು ಸಮ್ಯಕ್ತ್ವ ಸಿದ್ಧಿಗೆ ಪೂರ್ವಭಾವಿಗಳೆಂದು ತೋರಲಾಗಿದೆ. ಕಾಮ, ಅಹಂಕಾರಗಳೆರಡೂ ಲಯವಾದಾಗಲೆ ವೈರಾಗ್ಯವು ಪೂರ್ಣವಾಗುವುದು. ಅವನ್ನು ನಿಗ್ರಹಿಸಿದ್ದಲ್ಲದೆ ಯಾರೂ ಮಹಾತ್ಮರಾಗಲಾರರು. ಆದ್ದರಿಂದಲೇ 'ಆದಿಪುರಾಣ'ದ ಭರತ ಬಾಹುಬಲಿಗಳಿಬ್ಬರ ಕತೆಯ ಮೂಲಕ ಅಹಂಕಾರ ನಿವೃತ್ತಿಯನ್ನು ಪ್ರತಿಪಾದಿಸಲಾಗಿದೆ. ಭರತನಿಗೆ ಹೊರಗಿನ ಆಘಾತದಿಂದ ಅಹಂಕಾರ ನಿರಸನ–

ವಾಗುತ್ತದೆ. ಬಾಹುಬಲಿ ಸ್ವಪ್ರೇರಣೆಯಿಂದಲೆ ಅಹಂಕಾರ ತ್ಯಾಗ ಮಾಡುತ್ತಾನೆ. ಪಂಪ ಈ ಪ್ರಸಂಗವನ್ನು ಪ್ರೋಜ್ವಲವಾಗಿ ಚಿತ್ರಿಸಿದ್ದಾನೆ.

ವೃಷಭನ ಹಿಂದಿನ ಭವಗಳಲ್ಲಿ ಒಂದಾದ ವಜ್ರಜಂಘನ ಭವನದಲ್ಲಿ ಆತನ ಪ್ರಧಾನಮಂತ್ರಿ ಹಾಗೂ ಸೇನಾನಾಯಕರಾಗಿದ್ದವರೇ ಭರತ ಬಾಹುಬಲಿಯರು.

ಅತಿಗ್ನದ್ಧರಾಜ, ನಾರಕಿ, ವ್ಯಾಘ್ರ, ದಿವಾಕರಪ್ರಭದೇವ (ವೃಷಭ ಲಲಿತಾಂಗ-ನಾಗಿದ್ದಾಗ ಸಾಮಾನಿಕದೇವ), ಮತಿವರ (ವೃಷಭ ವಜ್ರಜಂಘನಾಗಿದ್ದಾಗ ಆತನ ಮಂತ್ರಿ) ಅಧೋಗ್ರೈವೇಯಕ ಅಹಮಿಂದ್ರ, ಸುಬಾಹು ವೃಷಭ ವಜ್ರನಾಭಿಯಾಗಿದ್ದಾಗ ಆತನ ಸಹೋದರ, ಅಹಮಿಂದ್ರ ಎಂಬ ಈ ಎಂಟುಭವಗಳು ಭರತನ ಪೂರ್ವಭವ-ಗಳಲ್ಲಿ ಚಿತ್ರಣಗೊಂಡಿವೆ. ಇವುಗಳಲ್ಲಿ ಅತಿಗ್ನದ್ಧರಾಜನ ವೃತ್ತಾಂತದಲ್ಲಿ ಮಾತ್ರ ಸ್ವಲ್ಪ ಕಥಾಂಶ ವಿವರವಿದೆ. ಉಳಿದಂತೆ ಹೆಚ್ಚಿನ ವಿವರಗಳಿಲ್ಲ.

ಭರತಚಕ್ರಿಯ ತಮ್ಮನೇ ಬಾಹುಬಲಿ. ಬಾಹುಬಲಿಯಾದರೂ ಪ್ರೀತಿವರ್ಧನ-ನೆಂಬ ರಾಜನ ಸೇನಾಪತಿಯಾಗಿ ತನ್ನ ರಾಜವೈರಾಗ್ಯಪರನಾಗಿ ತಪಸ್ಸನ್ನು ಆಚರಿಸಿದಾಗ ತಾನೂ ದೀಕ್ಷೆಗೊಂಡು ತಪಸ್ಸನ್ನು ಆಚರಿಸಿ ಸತ್ತು, ಭೋಗ ಭೂಮಿಯಲ್ಲಿ ಆರ್ಯನಾಗಿ ಹುಟ್ಟಿ, ಅನಂತರ ಪ್ರಭಾಕರನೆಂಬ ದೇವನಾಗಿ ಹುಟ್ಟಿದನು. ಅಲ್ಲಿ ಲಲಿತಾರ್ಯದೇವನಿಗೆ (ವೃಷಭನ ಭವಾಂತರಗಳಲ್ಲಿ ಒಂದು) ಸಾಮಾನಿಕದೇವನಾಗಿದ್ದನು. ಅನಂತರ ವಜ್ರಜಂಘನ ಸೇನಾಧಿಪತಿ ಅಕಂಪನೆಂಬುವನಾಗಿ, ಅಹಮಿಂದ್ರನಾಗಿ, ವಜ್ರನಾಭಿ ಚಕ್ರವರ್ತಿಯ ಸಹೋದರ ಮಹಾಬಾಹುವಾಗಿ, ಅಹಮಿಂದ್ರನಾಗಿ ಜನಿಸಿದನು. ಈ ಭವಮಾಲೆಗಳಲ್ಲಿ ಕೊನೆಯದಾಗಿಯೆಂಬಂತೆ ವೃಷಭನಿಗೆ ಆ ಅಹಮಿಂದ್ರನು ಬಾಹುಬಲಿ ಎಂಬ ಮಗನಾಗಿ ಹುಟ್ಟಿದನು. ಈತನೂ ಕೂಡ ವೃಷಭನು ಲಲಿತಾಂಗದೇವ-ನಾಗಿದ್ದಾನೆ. ಆತನೊಂದಿಗೆ ಬಾಂಧವ್ಯವನ್ನು ಹೊಂದುತ್ತಾ ಬಂದವನು. ಸೇವೆಗೈಯ್ಯುವ ಸಾಮಾನಿಕ ದೇವನಾಗಿ, ಸೇನಾಧಿಪತಿಯಾಗಿ, ಸಹೋದರನಾಗಿ, ಕೊನೆಗೆ ಮಗನಾಗಿ ಅವನೊಂದಿಗೆ ಅಂಟನ್ನು ಹೊಂದಿದವನು.

ವೃಷಭನ ಹೆಂಡತಿಯಾದ ಯಶಸ್ವತಿಗೆ ಭರತ ಜನಿಸಿದನು. ಭರತನ ಜನನದ ಸಂದರ್ಭದಲ್ಲಿನ ಉತ್ಸಾಹ-ಲವಲವಿಕೆಯಿಂದೊಡಗೂಡಿದ ವರ್ಣನಾಭಾಗವಿದೆ. ಭರತನು ಹುಟ್ಟಿದ ಸಂದರ್ಭವನ್ನು ಹೆಚ್ಚು ಮಾನವೀಯವೆಂಬಂತಹ ಸಹಜವರ್ಣನೆ ಮಾಡಿದ್ದಾನೆ. ಬಂಧುಜನರ, ಅಂತಃಪುರಸ್ತ್ರೀಯರ ಕೈಗಳಲ್ಲಿ ಭರತನು ಬೆಳೆದ ರೀತಿ ವಚನ ಭಾಗದಲ್ಲಿ ಗಂಭೀರವಾಗಿ ವರ್ಣಿತವಾಗಿದ್ದರೂ ಅಲ್ಲಿಂದ ಮುಂದಿನ ನಾಲ್ಕು ಕಂದಪದ್ಯಗಳಲ್ಲಿ ಆತನ ಬಾಲಲೀಲೆಯ ಹಾಗೂ ಸೌಂದರ್ಯದ ಚಿತ್ರಣವಿದೆ. ಆತನ

ನುಡಿಯ ತೊದಲು, ನಡೆಯ ತೊಡರು, ಜಡೆಗೆಂಪು, ಕಿರುನಗೆ, ಆತನ ಕೊರಳಲ್ಲಿ ಕಟ್ಟಿದ ಪರಾಕ್ರಮದ ಮೊಳಕೆಯ ಸಿರಿಯೇ ಎಂಬಂತೆ ಶೋಭಿಸುತ್ತಿದ್ದ ಹುಲಿಯುಗುರಿನ ಪದಕ, ಮಾತನಾಡುವಾಗಿನ ಬಳ್ಳಿಡಿಯ ಚೆಲವು, ಪದ್ಮರಾಗ ರತ್ನಖಚಿತನೆಲದ ಮೇಲೆ ಇಟ್ಟು ಹೆಜ್ಜೆ ಇವೆಲ್ಲವನ್ನೂ ವಿನ್ಯಾಸಗೊಳಿಸಿದ್ದಾನೆ. ಭರತನಿಗೆ ನಡೆದ ಅನ್ನಪ್ರಾಶನ, ಚೌಲ, ಉಪನಯನಾದಿ ಕ್ರಿಯೆಗಳು, ಆತನ ಕಾಮಾರಾವಸ್ಥೆ ಇವುಗಳ ವರ್ಣನೆಯನ್ನು ಪಂಪ ಒಂದು ವಚನ ಹಾಗೂ ಒಂದು ವೃತ್ತದಲ್ಲಿ ಸಂಕ್ಷಿಪ್ತವಾಗಿ ನೀಡಿದ್ದಾನೆ.

ತಪಸ್ಸಿಗೆ ತೆರಳಲು ನಿಶ್ಚಯಿಸಿದ ವೃಷಭನು, ಭರನಿಗೆ ರಾಜ್ಯಾಭಿಷೇಕವನ್ನು ಮಾಡಿದನು. ಭರತನನ್ನು ಅಯೋಧ್ಯೆಯಲ್ಲಿಯೂ ಬಾಹುಬಲಿಯನ್ನು ಪೌದನಪುರ-ದಲ್ಲಿಯೂ ಇರಿಸಿದನು. ಭರತರಾಜನು ಅಯೋಧ್ಯೆಯಲ್ಲಿ ಆಸ್ಥಾನದಲ್ಲಿರಬೇಕಾದರೆ ಅವನ ಪುರೋಹಿತ, ಆಯುಧಾಧ್ಯಕ್ಷ ಮತ್ತು ಅಂತಃಪುರದ ವೃದ್ಧ ಕಂಚುಕಿ, ಇವರು ಅಲ್ಲಿಗೆ ಬಂದರು. ಭೂಮಿಗೆ ಮೊಣಕಾಲನ್ನೂ ಹಣೆಯನ್ನೂ ತಾಕಿಸಿ ಪ್ರಣಾಮವನ್ನು ಸಲ್ಲಿಸಿದರು. ಅವರು ಶಿರೋವೇಷ್ಟನದಿಂದ ಜೋತುಬಿದ್ದ ಬಟ್ಟೆಯ ತುದಿಯಿಂದ ಬಾಯಿಯನ್ನು ಮರೆಮಾಡಿಕೊಂಡು ಪುರುದೇವನಿಗುಂಟಾದ ಕೈವಲ್ಯಮಹಿಮಾ, ಆಯುಧಾಗಾರದಲ್ಲಿ ಎದುರಿಸಿದ ಚಕ್ರರತ್ನ ಭರತನ ಮಹಾದೇವಿಗೆ ಉಂಟಾದ ಪುತ್ರೋತ್ಪತ್ತಿ ವಿಷಯಗಳನ್ನು ಮೂವರೂ ಭಿನ್ನೈಸಿದರು.

ಆಯುಧಾಗಾರದಲ್ಲಿ ಹುಟ್ಟಿದ ಚಕ್ರತ್ನದ ವಾರ್ತೆ ಹಾಗೂ ಪುತ್ರೋದಯದ ವಾರ್ತೆ ಇವೆಲ್ಲವು ಭರತನಿಗೆ ಪ್ರಮುಖವಾದುವೇ. ಇವೆಲ್ಲಕ್ಕಿಂತ ಮಿಗಿಲಾದುದು ಧರ್ಮ. ಧರ್ಮವೇ ಎಲ್ಲ ಲೌಕಿಕ ಶುಭಫಲಗಳಿಗೂ ಕಾರಣ ಎಂಬುದಕ್ಕಿಂತ ಭರತ, ಕೇವಲದರ್ಶನಕ್ಕೆ ಪ್ರಥಮಸ್ಥಾನ ನೀಡಿದ. ಭರತ ತನ್ನ ಕೌಟುಂಬಿಕ, ರಾಜಕೀಯ ವಿಷಯಗಳೇನೇ ಇರಲಿ ಅವುಗಳನ್ನು ಸ್ವಲ್ಪಕಾಲ ಬದಿಗೊತ್ತಿ, ಕೇವಲ ಜ್ಞಾನೋತ್ಪತ್ತಿಯ ಬಸವನಿಗೆ ಆದ್ಯತೆ ನೀಡಿ ಸ್ವಾಮಿಯ ಸಮವಸರಣಕ್ಕೆ ಬಂದು ಸ್ವಾಮಿಯನ್ನು ದರ್ಶಿಸಿ ಭಕ್ತಿಭಾವದಿಂದ ಸ್ತುತಿಸಿದ್ದಾನೆ. ವೃಷಭಸ್ವಾಮಿಯ ಮಹೋನ್ನತ ಅಲೌಕಿಕ ಆಧ್ಯಾತ್ಮಿಕತೆ ಭರತನ ಮನವನ್ನು ತಲುಂಬಿ ಆ ಜಂಜಡರಹಿತವಾದ ಆತ್ಮಾನಂದವನ್ನು ತಾನೂ ಬಯಸಿ, ತನಗೂ ಅಂತಹ ಸೌಖ್ಯವನ್ನುಂಟುಮಾಡು ಅರ್ಹಾ ಎಂದು ಪ್ರಾರ್ಥಿಸಿದ. ಭರತನ ವಿನಯ, ಆತ್ಮೀಯ ಮೊರೆ, ಭಗವತ್ ಗುಣಮಹಿಮೆಯ ಅರಿವು, ಅದನ್ನು ಪಡೆಯುವ ಹಂಬಲಿಕೆ ಇವೆಲ್ಲವೂ ಕಂಡುಬರುತ್ತವೆ. ಸ್ವಾಮಿಯನ್ನು ಕೊಂಡಾಡಲು ದೇವೇಂದ್ರಾದಿಗಳಿಗೇ ಸಾಧ್ಯವಿಲ್ಲ ಎಂದ ಮೇಲೆ ಅದು ತನ್ನಳವೇ? ಎಂದು ವಿಇನೀತನಾದ.

ಅಮರೇಂದ್ರೋನ್ನತಿಯೇ ಮೊದಲಾದವುಗಳಲ್ಲಿ ಭರತನಿಗೆ ತಾತ್ಸಾರವಿಲ್ಲ. ಅವೂ ಕೂಡ ಅಪೇಕ್ಷಣೀಯವಾದವುಗಳೇ. ಆದರೆ ಅದಕ್ಕಿಂತಲೂ ಮಿಗಿಲಾದ ಮುಕ್ತಿಶ್ರೀ ತನಗೆ ಲಭಿಸಲೆಂಬುದು ಆತನ ಉತ್ಕಟವಾದ ಅಭಿಲಾಷೆ. ಆದರೆ ವೈರಾಗ್ಯವೇ ಪರಮಭಾವ, ಮುಕ್ತಿಯೇ ಪರಮಸ್ಥಾನ ಎಂಬ ಅರಿವು ಆತನಲ್ಲಿ ಅಚ್ಚೊತ್ತಿದೆ. ಅದರ ಮಾರ್ಗವಾದ ದೀಕ್ಷಾವಿಧಿ, ಸಮಾಧಿಮರಣ, ಕರ್ಮಕ್ಷಯ, ಬೋಧಿಲಾಭ ಇವುಗಳು ತನಗೆ ದೊರೆಕೊಳ್ಳಲಿ ಎಂಬುದು ಭರತನ ಮೊರೆ.

ಭರತ ಸಮವಸರಣದಲ್ಲಿ ವೃಷಭನಾಥನನ್ನು ಕುರಿತು, ಲೋಕದ ವಸ್ತುಸ್ಥಿತಿ-ಯನ್ನು ಅರಿಯಲು ಪ್ರಶ್ನಿಸಿದುದು, ಸ್ವಾಮಿಯ ಉಪದೇಶ, ಅನಂತ ವೀರ್ಯಾದಿಗಳ ದೀಕ್ಷೆ, ಅನಂತವೀರ್ಯಾದಿಗಳು ಗಣಧರರಾದುದು ಬ್ರಾಹ್ಮೀ ಸೌಂದರಿಯರ ದೀಕ್ಷೆ ಇವು ಕಂಡುಬರುತ್ತವೆ.

ವೃಷಭನ ಕೇವಲಜ್ಞಾನದ ನಂತರ ಭರತಬಾಹುಬಲಿಯರಿಗೆ ಸಂಬಂಧಿಸಿದಂತೆ ಮತ್ತೊಂದು ಮಗ್ಗುಲಿನ ಚಿತ್ರಣ ಪ್ರಾರಂಭವಾಗುತ್ತದೆ. ಆ ಕಡೆ ಪರಮನ ಧರ್ಮೋಪದೇಶ ಯಾತ್ರೆಯಾದರೆ ಈ ಕಡೆ ಭರತನ ದಿಗ್ವಿಜಯ ಯಾತ್ರೆ ಪ್ರಾರಂಭ-ವಾಗುತ್ತದೆ. ದಿಗ್ವಿಜಯ ಪ್ರಾರಂಭದಿಂದ ಹಿಡಿದು ಷಟ್ಖಂಡಮಂಡಲ ವಿಜಯದ ವೃತ್ತಾಂತಗಳವರೆಗೆ ಭರತಚಕ್ರಿ ವಿಜೃಂಭಿಸಿದ್ದಾನೆ. ಚಕ್ರರತ್ನವೇ ಮೊದಲಾದ ಹದಿನಾಲ್ಕು ರತ್ನಗಳ ಪೂಜೆ, ಭರತನ ಪರಿವಾರದ ವರ್ಣನೆ – ಸೈನ್ಯದ ವರ್ಣನೆ, ವನಕೇಳಿ-ಜಲಕೇಳಿ, ಚಂದ್ರಿಕಾ ವಿಹಾರ, ಮಗಧಾಮರವಿಜಯ, ಷಟ್ಖಂಡಮಂಡಲ ವಿಜಯ, ದಿಗ್ವಿಜಯ ಶಾಸನ, ಸಮವರಸರಣದಲ್ಲಿ ಸ್ವಾಮಿಯ ದರ್ಶನ ಈ ಮೊದಲಾದ ಭಾಗಗಳಲ್ಲೆಲ್ಲಾ ಭರತನಿಗೆ ಹಾಗೂ ಭರತನಿಗೆ ಸಂಬಂಧಿಸಿದ ಪರಿವಾರಕ್ಕೆ ಹೆಚ್ಚಿನ ಪ್ರಾಶಸ್ತ್ಯ. ಇಲ್ಲೆಲ್ಲಾ ಭರತನೇ ನಾಯಕ.

ಆದಿದೇವನ ದಿಗ್ವಿಜಯ ಅಹಿಂಸಾ ವಿಧಾನದಿಂದ ನಡೆದು ಜಗತ್ತನ್ನು ಪರಿವರ್ತಿಸಿದರೆ, ಭರತನದು ಹಿಂಸಾ ಪುರಸ್ಸರವಾಗಿ ನಡೆದು ಲೋಕವನ್ನು ಮಣಿಸುತ್ತದೆ. ಅವನು ರತ್ನತ್ರಯವನ್ನು ಸಾಧಿಸಿದರೆ ಇವನು ಚಕ್ರರತ್ನವನ್ನು ಸಾಧಿಸುತ್ತಾನೆ. ಆಯುಧಾಗಾರದಲ್ಲಿ ಹುಟ್ಟಿದ ಚಕ್ರವನ್ನು ಮುಂದಿಟ್ಟುಕೊಂಡು ಭರತ ಷಟ್ಖಂಡ ಭೂಮಂಡಲವನ್ನು ಪಾದಾಕ್ರಾಂತಗೊಳಿಸಲು ಉದ್ಯುಕ್ತನಾಗುತ್ತಾನೆ. ಎರಡನೆಯ ಗಂಗೆ ನಡೆಯುವಂತೆ ಅವನ ಪಡೆ ನಡೆಯುತ್ತದೆ; ಅವನ ಶೌರ್ಯಾಟೋಪಕ್ಕೆ ತಲ್ಲಣಿಸಿ ರಾಜರು ಶರಣಾಗುತ್ತಾರೆ. ಮಲೆತು ನಿಂತವರನ್ನು ಬಗ್ಗು ಬಡಿಯುತ್ತಾನೆ. ಅವನು ಅಬ್ಬರ ಅಹಂಕಾರಗಳಿಮದ "ಈಂಟುವೆನೋ ದಾಂಟುವೆನೋ

ಲವಣಾಂಬುರಾಶೀಯಂ" ಎಂದು ಉಗ್ಗಡಿಸಿದ್ದಾನೆ. ಭೂಮಂಡಲವನ್ನೆಲ್ಲ ಗೆದ್ದು ವಿಜಯೋತ್ಸವವನ್ನಾಚರಿಸುತ್ತ ತನ್ನ ಪ್ರಶಸ್ತಿಯನ್ನು ವೃಷಭಾಚಲದಲ್ಲಿ ಕೆತ್ತಿಸಬೇಕೆಂದು ಅಲ್ಲಿಗೆ ಹೋಗಿ ನೋಡಿದಾಗ ಸಿಡಿಲು ಹೊಡೆದಂತಾಗುತ್ತದೆ.

ಅದಱೊನೇಕ ಕಲ್ಪಶತಕೋಟಿಗಳೊಳ್ ಸಲೆ ಸಂದ ಚಕ್ರವ್ರಂ
ದದ ಚಲದಾಯದಾಯತಿಯ ಬೀರದ ಚಾಗದ ಮಾತುಗಳ್ ಪೊದ
ಳ್ದೊದವಿರೆ ತತ್ಪ್ರಶಸ್ತಿಗಳೊಳಂತವನೊಯ್ಯನೆ ನೋಡಿ ನೋಡಿ ಸೋ
ರ್ದುದು ಕೊಳಗೊಂಡ ಗರ್ವರಸಮಾ ಭರತೇಶ್ವರ ಚಕ್ರವರ್ತಿಯಾ

ವೃಷಭಾಚಲದಲ್ಲೆಲ್ಲ ಹಿಂದಿನ ಅಸಂಖ್ಯಾತ ವಿಶ್ವವಿಜೇತರಾದ ಕೋಟ್ಯಂತರ ಚಕ್ರಿಗಳ ಪ್ರಶಸ್ತಿಗಳನ್ನು ಹೊತ್ತು ಮೆರೆಯುತ್ತಿದ್ದು ಭರತನ ಜಯಪ್ರಶಸ್ತಿಗೆ ಜಾಗವೇ ಇರಲಿಲ್ಲ. ಹೇಳಹೆಸರಿಲ್ಲದಂತೆ ಮಣ್ಣಾದ ಅವರ ಸಾಧನೆಗಳ ನಿಷ್ಫಲತೆಯನ್ನು ಲೋಕಕ್ಕೆ ಸಾರುವಂತೆ ಎದುರಿಗಿದ್ದ ವೃಷಭಾಚಲವನ್ನು ಕಂಡು ಭರತ ನಾಚಿದ. ಆದರೆ ಅಹಂಕಾರ ಬಿಡಲಿಲ್ಲ. ಯಾರೋ ಒಬ್ಬ ರಾಜನ ಪ್ರಶಸ್ತಿಯನ್ನು ದಂಡರತ್ನದಿಂದ ಅಳಿಸಿ, ತನ್ನ ಪ್ರಶಸ್ತಿಗೆ ಎಡೆ ಮಾಡಿಕೊಂಡು 'ನೆಲ ನಿಲ್ವಿನೆಗಂ' ತನ್ನ ಸಾಧನೆ ಇರುತ್ತದೆ ಎಂದು ನಂಬಿದ ಭರತನ ಕಾರ್ಯದ ಅಸಾರತೆಯನ್ನು ಸಂದರ್ಭವೇ ಸ್ಪಷ್ಟಪಡಿಸುತ್ತದೆ. ತಾನೇ ಅಳಿಸಿದ ದೊರೆಯ ಹೆಸರಿನಂತೆ ಮತ್ತೊಬ್ಬ ತನ್ನ ಹೆಸರನ್ನು ಅಳಿಸಿ ಹಾಕುತ್ತಾನೆಂಬ ಪರಿಜ್ಞಾನವೂ ಇಲ್ಲದೆ ಬರೆಸಿದ ಭರತನ ಅಹಂಕಾರ ಪೂರ್ಣವಾಗಿ ಕರಗಬೇಕೆಂದರೆ ಮತ್ತಷ್ಟು ಕಾಲ ಕಾಯಬೇಕಿತ್ತು.

ದಿಕ್ಕು-ದಿಕ್ಕುಗಳನ್ನೆಲ್ಲ ಗೆದ್ದು ಚಕ್ರರತ್ನ ಇದ್ದಕ್ಕಿದ್ದಂತೆ 'ಅಯೋಧ್ಯಾಪುರಮಂ ಪುಗದೆ ತಱುಂಬಿ ನಿಂದುದು". ಚಕ್ರಪುರದ ಬಾಗಿಲಲ್ಲೆ ನಿಂತದ್ದು ಕಂಡು ಅದರ ರಕ್ಷಕರಾದ ಯಕ್ಷ ಸಹಸ್ರರು 'ಭರತನನ್ನು ದ್ವೇಷಿಸುವವರು ಇನ್ನೂ ಇದ್ದಾರೆ. ಅವರ ನಾಶಕ್ಕೆ ಭರತನೇಕೆ? ನಾವೇ ಹೋಗಿ ಮನುಗಿಸಿದರಾಯಿತು' ಎಂದುಕೊಂಡರು. ಸೇನಾಪತಿಗಳು ಚಕ್ರ ನಿಂತ ವಿಷಯ ತಿಳಿಸಿದಾಗ ಆಶ್ಚರ್ಯದಿಂದ ಪುರೋಹಿತರನ್ನು ಕರೆಸಿ ವಿಚಾರಿಸಿದಾಗ 'ನೀನು ಗೆಲ್ಲಬೇಕಾದವರಿದ್ದಾರೆಂಬುದು ಅದರ ಸೂಚನೆ. ಪರರಾಜರ ಭೂಮಂಡಲವನ್ನೇನೋ ವಶಪಡಿಸಿಕೊಂಡಾಯಿತು. ಇನ್ನು ಅಂತರ್ಮಂಡಲವನ್ನು ಶೋಧಿಸಬೇಕಾಗಿದೆ. ಬಾಹುಬಲಿ ಮುಂತಾದ ಭರತನ ಸೋದರರು ಅಣ್ಣನನ್ನು ಚಕ್ರವರ್ತಿಯೆಂದು ಒಪ್ಪಿ ಗೌರವಿಸಲು ಸಿದ್ಧರಿಲ್ಲ; ಅವರನ್ನು ಬಾಗಿಸಬೇಕಾಗಿದೆ ಎಂದು ತಿಳಿಸಿದ. ಅದುವರೆಗೂ ಅಣ್ಣತಮ್ಮಂದಿರಲ್ಲಿ ಅಸಮಾಧಾನ-ವೆಂಬುದು ಇರಲಿಲ್ಲ. ಆದರೆ ದಿಗ್ವಿಜಯದ ಹಂಬಲ ಅತ್ಯಾಸೆಗಳ ಫಲವಾಗಿ ಭರತನಿಗೆ

ಸಂಬಂಧಗಳು ಮಹತ್ವದ್ದೆನಿಸಲಿಲ್ಲ. ಅದಕ್ಕೆ ಸರಿಯಾಗಿ ಪುರೋಹಿತ 'ಭರತೇಶ್ವರ ನಿನ್ನ ಪಾದಪದ್ಮಗಳಿಗೆರಗಿ ನಿನ್ನ ತಮ್ಮಂದಿರು ಸುಖವನನ್ನನುಭವಿಸಲಿ; ಇಲ್ಲವೆ ಪುರು-ಪರಮೇಶ್ವರ ಪಾದಪದ್ಮಗಳಿಗೆರಗಿ ತಪಸ್ಸನ್ನು ಕೈಗೊಳ್ಳಲಿ' ಎಂದು ಹೇಳಿ ಕಳುಹಿಸಿ ಎಂದಾಗ ಅದಕ್ಕೆ ಭರತ ಕಿವಿಗೊಟ್ಟ. ಪಂಪನು ಈ ಭಾಗದುದ್ದಕ್ಕೂ ಪೂರ್ವ-ಪುರಾಣದ ಭಾಗವನ್ನು ಸೊಗಸಾಗಿ ಸಂಗ್ರಹಿಸಿದ್ದಾನೆ. ಕೆಲವೆಡೆ ತನ್ನದೇ ಆದ ವರ್ಣನೆಯನ್ನು ನೀಡಿದ್ದಾನೆ. ಭರತ 'ಹೇಗೂ ತಾವು ಸೋದರರು. ಕೊಲೆಗೆ ಪಾತ್ರರಾಗುವುದಿಲ್ಲವೆಂಬ ಮನೋಬಲವಿರಬೇಕು.... ಅವರನ್ನು ಸೋಲಿಸಲು ತನ್ನಿಂದಾಗದೇ? ಮತ್ತೆಲ್ಲ ಅರಸುಗಳೆರಗಿದರೂ ತನಗೆ ಬಂದ ಭಾಗ್ಯವೇನು? ಬಾಹುಬಲಿ ಇದಕ್ಕೆ ಹೊರತೆ? ಪೌದನಪುರವು ತನ್ನಾಳ್ವಿಕೆಗೊಳಪಡದೆ, ಮತ್ತಿತರ ಪಟ್ಟಣಗಳೆಲ್ಲ ವಶಕ್ಕೆ ಬಂದರೇನುಪಯೋಗ?' ಎಂದು ಕೋಪದಿಂದ ನುಡಿದ. ಪುರೋಹಿತನು ಪತ್ರ-ವೊಂದನ್ನು ಬರೆದು ದೂತರೊಡನೆ ಕಳಿಸುವಂತೆ ತಿಳಿಸಿದ. ತಮ್ಮಂದಿರನ್ನು ಬಗ್ಗಿಸ-ಬೇಕೆಂಬುದು ಭರತನ ಚಲ. ಅದಕ್ಕಾಗಿ ಈ ಸಂದೇಶ ಕಳಿಸಿದ.

ಎನಗೊರ್ವಂಗುಪಭೋಗಮಲ್ತು ವಸುಧಾಸಾಮ್ರಾಜ್ಯಮೋರಂತೆ ನಿ
ಮ್ಮನಿಬರ್ಗಂ ಪರಿಯಣ್ಣನೇಂ ಜನಕನೇನೆಂಬೊಂದು ಕೊಂಡಾಟದಿಂ
ವಿನಯಂ ಸಾಲ್ವುದು ತಾಮುಮಾಮುಮೊಡನಿರ್ಪ್ಪಂ ಬರ್ಪ್ಪುದೆಂಬೀಶಶಾ
ಸನಮಂ ನೆತ್ತಿಯೊಳಾಂತು ಬನ್ನಿಮೆಱಗಿಂ ಚಕ್ರೇಶಪಾದಾಬ್ಜದೊಳ್

ಅಧಿಕಾರದ ಹಂಬಲ, ಅದರ ಪರಿಣಾಮಗಳನ್ನು ತಿಳಿಹೇಳಲೆಂದು ಬರುವ ಭರತ-ಬಾಹುಬಲಿಯರ ಕತೆಯ ಮೂಲಕ ಅಧಿಕಾರದ ಆಸೆ ಮನುಷ್ಯನನ್ನು ಯಾವ ನೆಲೆಗಾದರೂ ಒಯ್ಯಬಲ್ಲದು ಎಂಬುದನ್ನು ಪಂಪ ಈ ಪ್ರಸಂಗದಲ್ಲಿ ಸಮರ್ಥವಾಗಿ ನಿರೂಪಿಸಿದ್ದಾನೆ. ತನ್ನ ತಮ್ಮಂದಿರನ್ನು ಶರಣಾಗಿಸಲು ಕಳುಹಿಸಿದ ಈ ಸಂದೇಶ ಭಾವನಾತ್ಮಕ ಸಂಬಂಧ ವ್ಯಾವಹಾರಿಕವಾಗಿ ಪರಿವರ್ತಿತವಾಗಿ ಬಿಡುವ ದುರಂತವನ್ನು ಸೊಗಸಾಗಿ ನಿರೂಪಿಸುತ್ತದೆ. ನಮಗೆಲ್ಲರಿಗೂ ಎರಡು ಜಗತ್ತುಗಳಿವೆ. ಒಂದು ಭಾವನಾ ಜಗತ್ತು. ಮತ್ತೊಂದು ವ್ಯಾವಹಾರಿಕ ಪ್ರಪಂಚ. ಇವೆರಡರ ನಡುವೆ ಹೊಂದಾಣಿಕೆ ಅಷ್ಟು ಸುಲಭವಲ್ಲ. ವ್ಯಾವಹಾರಿಕ ಜಗತ್ತಿನ ಕ್ರೌರ್ಯ, ನಿಷ್ಕರುಣೆಯನ್ನು ತಾಳಿಕೊಳ್ಳಲು ನಾವು ಕೆಲವೊಮ್ಮೆ ಭಾವನಾ ಜಗತ್ತಿನ ಆಶ್ರಯ ಪಡೆಯುತ್ತೇವೆ. ಆದರೆ ವ್ಯಾವಹಾರಿಕ ಜಗತ್ತು ನಮ್ಮ ಭಾವಪ್ರಪಂಚವನ್ನು ಅಲುಗಾಡಿಸುವ ಅಲ್ಲೋಲಕಲ್ಲೋಲ-ಗೊಳಿಸುವ ಪ್ರಯತ್ನ ಮಾಡುತ್ತಲೇ ಇರುತ್ತದೆ. ಇಲ್ಲಿ ಭರತ ಹೇಳುವ "ಈ ಸಾಮ್ರಾಜ್ಯ ನನಗೊಬ್ಬನಿಗೇ ಅಲ್ಲ, ನಿಮ್ಮೆಲ್ಲರಿಗೂ ಸೇರಿದ್ದು. ನಾವು ನೀವು ಒಡಗೂಡಿ ಅನುಭವಿಸುವ ಬನ್ನಿ" ಎಂಬ ಮಾತುಗಳು ಸಹಜ ಭ್ರಾತೃವಾತ್ಸಲ್ಯವನ್ನು ಸೂಚಿಸು-

ವಂಥವು. ಆದರೆ ಇ ಪದ್ಯದ ಕಡೆಯ ಸಾಲು ಈ 'ವಾತ್ಸಲ್ಯ'ವನ್ನು 'ವ್ಯವಹಾರ'ವನ್ನಾಗಿ ಪರಿವರ್ತಿಸಿ 'ಅಧಿಕಾರ'ವನ್ನು ಸ್ಥಾಪಿಸಲು ಪ್ರಯತ್ನಿಸುತ್ತದೆ. 'ಈ ರಾಜಾಜ್ಞೆಯನ್ನು ಒಪ್ಪಿ, ಸ್ವೀಕರಿಸಿ ಬಂದು ಚಕ್ರವರ್ತಿಯ ಪಾದಗಳಿಗೆ ನಮಸ್ಕರಿಸಿ" ಎಂಬ ಮಾತುಗಳು ಅಧಿಕಾರದ ಆದೇಶ. ಆದರೆ ತಂದೆ ಎಲ್ಲರಿಗೂ ಕೊಟ್ಟಿರುವ ರಾಜ್ಯದಲ್ಲಿ ಭರತನಿಗೆ ಯಾವ ಹಕ್ಕೂ ಇಲ್ಲ. ದಿಗ್ವಿಜಯವೆಸಗಿ ಬಂದ ಭರತನು ತನ್ನ ಆಳ್ವಿಕೆಗೆ ಶರಣಾಗಿ ಎಂದು ತಮ್ಮಂದಿರಿಗೆ ದೂತನ ಮೂಲಕ ಆದೇಶ ಕಳುಹಿಸಿದ. ಅವನ ತಮ್ಮಂದಿರು

> ಪಿರಿಯಣ್ಣಂ ಗುರು ತಂದೆಯೆಂದೆಱುವಂ ಮುನ್ನೆಲ್ಲಮಿಂತೀಗಳಾ
> ಳರಸೆಂಬೊಂದು ವಿಭೇದಮಾದೊಡೆಱಿಕಂ ಚಿಃ ಕಷ್ಟಮಲ್ತೇ ವಸುಂ
> ಧರೆಗಯ್ಯಂ ದಯೆಗೆಯ್ಯೆ ಮುಂಮ ಪಡೆದುದರ್ಕಿಂತೀತನೊಳ್ ತೊಟ್ಟ ಕಿಂ
> ಕರ ಭಾವಂ ನಮಗಕ್ಕಿಗೊಟ್ಟು ಮಡಗೂಱುಣ್ಬಂದಮಂ ಪೋಲದೇ
>
> (೧೪: ೩೨)

ಹಿರಿಯಣ್ಣನು ಗುರು, ತಂದೆ ಎಂದು ತಿಳಿದು ಮೊದಲು ನಮಸ್ಕರಿಸುವುದು ಯುಕ್ತ. ಆದರೆ ಆಳು-ಅರಸ ಎಂಬ ಭೇದ ಭಾವವುಂಟಾದುದರಿಂದ ಸ್ನೇಹ ತೋರಿಸುವುದು ಕಷ್ಟ. ಭೂಮಿಯನ್ನು ತಂದೆಯು ದಯೆಮಾಡಿಕೊಟ್ಟ ಕಾರಣ ನಾವು ಅದನ್ನು ಹಿಂದೆ ಪಡೆದೆವು. ಈಗ ಭರತನಲ್ಲಿ ಕಿಂಕರ ಭಾವವನ್ನು ತೋರಿಸಿದರೆ ನಮ್ಮ ಅಕ್ಕಿಯನ್ನು ಕೊಟ್ಟು ಅವನು ತಿಂದು ಮಿಕ್ಕ ಎಂಜಲು ಉಂಡಂತೆ ಆಗುವುದಿಲ್ಲವೇ' ಎಂದು ತಮ್ಮಲ್ಲೇ ಆಲೋಚಿಸಿದರು. 'ಅಕ್ಕಿಗೊಟ್ಟು ಮಡಗೂಱುಣ್ಬದಂದಂ' ಎಂಬ ದೇಸೀ ನಾಣ್ಣುಡಿ ಶಕ್ತಿಯುತವಾಗಿ ಬಂದಿದೆ. 'ಪುರುರಾಜನ ಮಕ್ಕಳಾಗಿ ಪುರುಷಾರ್ಥ-ವನ್ನು ಕೈಬಿಡೆವು. ಭರತನ ಅಧೀನದಲ್ಲಿ ಏಕಿರಬೇಕು. ಈ ಕೋಟಲೆಯೇ ಬೇಡ' ಎಂದು ಆಲೋಚಿಸಿ ನೂರು ಮಂದಿ ತಮ್ಮಂದಿರು ನಿರ್ವೇಗ ಪರರಾಗಿ ತಂದೆಯ ಬಳಿ ಹೋಗಿ 'ನಿನ್ನ ಪಾದಾರವಿಂದವೇ ಶರಣು, ಅನ್ಯರಿಗೆ ಎರಗೆವು' ಎಂದು ದೀಕ್ಷೆ ಕೈಕೊಳ್ಳುತ್ತಾರೆ. ಆದರೆ ಸ್ವಾಭಿಮಾನಿಯಾದ ಬಾಹುಬಲಿಗೆ ಈ ಅಧಿಕಾರದ ಅಹಂ ಅರ್ಥವಾಗುತ್ತದೆ. ಪ್ರೀತಿ, ವಾತ್ಸಲ್ಯಗಳ ನೆಪದಲ್ಲಿ ಅಧಿಕಾರ ಸ್ಥಪಿಸಬಯಸುವ ಭರತನ ಹುನ್ನಾರವನ್ನು ಬಲ್ಲ ಆತ ಅವನ ಪತ್ರವನ್ನೂ ಪೂರ್ಣವಾಗಿ ಕೇಳದೆ 'ಈಗಲಾದರೂ ನಾವು ಸ್ಮರಣೆಗೆ ಬಂದೆವಲ್ಲ' ಎಂದು ವ್ಯಂಗ್ಯವಾಡಿದ. 'ನನ್ನ ಪ್ರೀತಿಯ ತಮ್ಮನಿಲ್ಲದೆ ನನ್ನೆಲ್ಲ ಸಾಮ್ರಾಜ್ಯವೂ ವ್ಯರ್ಥವೇ. ಅವನು ತನಗೆ ಮೊದಲು ಬಂದೆರಗದಿದ್ದರೆ, ಯಾರು ನನಗೆ ನಮಸ್ಕರಿಸಿದರೂ ಅದು ಅತಿಶಯ ಉನ್ನತಿಯನ್ನು ತಾರದು' ಎಂಬ ಮಾತಿಗೆ ಬಾಹುಬಲಿ ಕೆರಳಿ 'ಚಕ್ರರತ್ನವನ್ನು ಮುಂದಿಟ್ಟುಕೊಂಡು ಮಾಡಿರುವ ದಿಗ್ವಿಜಯ ಅದೆಂತಹ ದಿಗ್ವಿಜಯ? ನೀನು ಹೇಳಿದುದು ಭರತನ ವಿಜಯ ಸಾಹಸವನ್ನಲ್ಲ. ಆತನ

ಭಂಗವನ್ನೇ ಎತ್ತಿ ಹಿಡಿದಿರುವೆ. ಚಕ್ರವನ್ನು ಮುಂದಿಟ್ಟು ಭಿಕ್ಷೆ ಬೇಡಿ ತಂದುದನ್ನೇನು ಹೊಗಳುವೆ' ಎಂದು ಹಂಗಿಸಿದ. ಅಣ್ಣನಿಗೆ ಮಣಿಯುವುದು ಅಪಮಾನವಲ್ಲ; ಅದರೆ ನೆತ್ತಿಯ ಮೇಲೆ ಕತ್ತಿ ಊರಿ ಬಲವಂತವಾಗಿ ಎರಗಿಸುವಂತೆ ಮಾಡುವ ಮಾರ್ಗ ಮಾತ್ರ ಅನುಚಿತವೆಂಬುದು ಬಾಹುಬಲಿಯ ಅಭಿಪ್ರಾಯ. ಆದ್ದರಿಂದಲೇ

ಪಿರಿಯಣ್ಣಂಗೆಱಗುವುದೇಂ
ಪರಿಭವಮೇ ಕೀಱಿ ನೆತ್ತಿಯೊಳ್ ಬಾಳಂ ನಿ
ರ್ನೆರಮೂಱಿ ಚಲದಿನೆಱಗಿಸ
ಲಿರೆ ಭರತಂಗೆರಗುವೆಱಕಮಂಜಮೆಯಲ್ತೇ

ಆಳ್ ಅರಸ ಎಂಬ ಭೇದ ಚಿಃ ಕಷ್ಟವಲ್ಲವೇ? ಅದಕ್ಕೆ ಬಾಹುಬಲಿ ಸಿದ್ಧನಿಲ್ಲ. ಅಣ್ಣತಮ್ಮಂದಿರ ಅನ್ಯೋನ್ಯ ಸಂಬಂಧ ಸಾಮಾಜಿಕವಾದ ಆಸ್ತಿಯ ಪ್ರಶ್ನೆ ಬಂದಾಗ ಒಡೆದುಹೋಗುವ ದುರಂತವನ್ನು ಪಂಪ ಇಲ್ಲಿ ಚಿತ್ರಿಸಿದ್ದಾನೆ. ಅಣ್ಣತಮ್ಮಂದಿರ ವೈಯಕ್ತಿಕ ಸಂಬಂಧ 'ಅಧಿಕಾರ'ದ ಸ್ವಾರ್ಥದ ಹಂಬಲಕ್ಕೆ ಚಕ್ರವೊಂದು ನೆಪವಾದ್ದರಿಂದ ಬಾಹುಬಲಿ 'ತಂದೆಯ ಹೊರತು ಯಾರಿಗೂ ತಲೆಬಾಗುವುದಿಲ್ಲವೆಂದೂ, ತಂದೆ ತನಗೆ ಕೊಟ್ಟ ರಾಜ್ಯವನ್ನು ತಾನು ಯಾರಿಗೂ ಕೊಡುವುದಿಲ್ಲ. ಸಮರ್ಥನಲ್ಲದವನೊಡನೆ ಅರ್ಥವಿಲ್ಲದ ಮಾತನ್ನು ಆಡಲಿ. ಜಿಂಕೆಯನ್ನು ಹಿಡಿಯುವುದಕ್ಕಾಗಿ ಹಾಡುವ ಹಾಡನ್ನು ಸಿಂಹದ ಎದುರಿಗೆ ಹಾಡಬಹುದೆ? ನಾನು ಯುದ್ಧಕ್ಕೆ ಸಿದ್ಧ'ನೆಂದು ದೂತನಿಗೆ ಹೇಳಿಕಳುಹಿಸಿದ.

ಭರತನ ಬಳಿಗೆ ಬಂದ ದಕ್ಷಿಣಾಂಕ 'ರಾಜಾಧಿರಾಜ ನಿನಗೆ ಷಟ್ಖಂಡ ಭೂಮಂಡಲವು ಎರಗಿದುದು ಸಾಲದೆ? ಅವಿಧೇಯನಾದ ತಮ್ಮನಿಂದ ಆಗ-ಬೇಕಾದುದು ಏನು? ಅವನನ್ನು ಕಡೆಗಣಿಸು. ನಿಂದೋಕ್ತಿಯನ್ನು ತಪ್ಪಿಸಿಕೋ. ನೀನು ಕೋಪಿಸಿಕೊಂಡರೆ ನಿನ್ನ ತಮ್ಮನು ನಿನಗೆ ಎರಗನು' ಎಂದು ಬುದ್ಧಿವಾದ ಹೇಳಿದ. ಪೂರ್ವಪುರಾಣದಲ್ಲಿ ಇಲ್ಲದ ಈ ಸಮಯೋಚಿತವಾದ ಬುದ್ಧಿವಾದದ ಮಾತನ್ನು ಪಂಪ ಸೇರಿಸಿದ್ದಾನೆ.

ಎರಡೂ ಸೈನ್ಯಗಳೂ ಯುದ್ಧಕ್ಕೆ ಸನ್ನದ್ಧರಾದರು. ವೃಷಭನಾಥನ ಇಬ್ಬರು ಚರಮದೇಹಿ ಪುತ್ರರ ನಡುವೆ ನಡೆಯುವ ಯುದ್ಧದಿಂದ ಸಂಭವಿಸಬಹುದಾದ ಭೀಕರ ಹಿಂಸೆಯನ್ನು, ವಿನಾಶವನ್ನು ಗುರುತಿಸಿದ ಎರಡೂ ಪಕ್ಷದ ಮಂತ್ರಿಗಳು ಇವರಿಬ್ಬರೂ ವಜ್ರದೇಹಿಗಳಾದ್ದರಿಂದ ವೃಥಾ ಸೈನ್ಯ ನಾಶ ಎಂದು ತೀರ್ಮಾನಿಸಿ 'ಈ ಯುದ್ಧದಿಂದ ಏನು ಪ್ರಯೋಜನ? ನಿಮ್ಮಿಬ್ಬರ ನಡುವೆ ಧರ್ಮಯುದ್ಧವಾಗುವುದು ಸರ್ವೋತ್ತಮ'

ಎಂದು ತಂತಮ್ಮ ತೋಳ್ಬಲವನ್ನು ತೋರಿಸಬೇಕೆಂದಿದ್ದ ಅಣ್ಣತಮ್ಮಂದಿರನ್ನು ದ್ವಂದ್ವ ಯುದ್ಧ ಮಾಡಲೊಪ್ಪಿಸಿದರು. ರೆಪ್ಪೆಯಾಡಿಸದಂತೆ ನೋಡುವ ದೃಷ್ಟಿಯುದ್ಧ, ಮುಖಕ್ಕೆ ನೀರೆರಚುವ ಜಲಯುದ್ಧ ಹಾಗೂ ಪರಸ್ಪರರ ಮಲ್ಲಯುದ್ಧಗಳನ್ನು ಏರ್ಪಡಿಸಿದರು. ಅಪ್ರತಿಮ ವೀರನಾದ ಬಾಹುಬಲ್ಲಿ ಎಲ್ಲದರಲ್ಲೂ ವಿಜಯಿಯಾದ. ಮಲ್ಲಯುದ್ಧದಲ್ಲಿ ಅಣ್ಣನನ್ನು ಮೇಲೆತ್ತಿದ ಬಾಹುಬಲಿ ಹಾಗೆ ಮಾಡಬಾರದೆಂದು ಎಂದೆನಿಸಿ ಕೆಳಗಿಳಿಸಿದ. ಬಾಹುಬಲಿಯ ಜೊತೆ ಯುದ್ಧಕ್ಕಿಳಿದು ಸೋತು ಬಸವಳಿದ, ಅವಮಾನಿತನಾದ ಭರತ ಚಕ್ರಪ್ರಯೋಗಿಸಿದರೂ ಬಾಹುಬಲಿಯನ್ನು ಭೇದಿಸಲಾರದ ಅದು ಕಳೆಗುಂದಿ ಅವನಿಗೆ ಪ್ರದಕ್ಷಿಣೆ ಮಾಡಿ ಅವನ 'ಬಲದ ಮುಯ್ಪಿನ ಕೆಲದ'ಲ್ಲಿ ನೆಲೆ ನಿಂತಿತು. ಯಾವ ಚಕ್ರರತ್ನದಿಮದ ಬೀಗಿ ಗರ್ವದ ಮಾತುಗಳನ್ನಾಡಿದ್ದನೋ ಅದೇ ಚಕ್ರರತ್ನ ಬಾಹುಬಲಿಯ ಮುಂದೆ ಮಸುಳಿ ನಿಂತಿದೆ. ಕೀರ್ತಿಯ ವ್ಯಾಮೋಹಕ್ಕೆ ಸಿಲುಕಿ ಅಪರಾಧ ಮಾಡಿ ಸೋತು ಅಪಮಾನದ ಕೆಸರಿನಿಂದ ತುಂಬಿದ, ಅಹಂಭಾವ ಕಳೆದುಕೊಂಡು ತುಂಬಿದ ನೆರವಿಯ ನಡುವೆ ಭರತ ನಾಚಿಕೆಯಿಂದ ತಲೆಬಾಗಿ ಆಪಾದಿತನಂತೆ ನಿಂತಿದ್ದ ಅವನೆದೆಯ ಮಹತ್ವಾಕಾಂಕ್ಷೆಯ ಗರ್ವರಸ ಈಗ ಪೂರ್ಣವಾಗಿ ಸೋರಿ ಹೋಯಿತು.

ಆದರೆ ಬಾಹುಬಲಿಯಲ್ಲಿ ಅದೆಂತಹ ಪರಿವರ್ತನೆ ಸ್ಫುರಿಸಿತೆಂದರೆ ಆತ ಇದ್ದಕ್ಕಿದ್ದಂತೆ ವೈರಾಗ್ಯದೀಪ್ತನಾದ.

ಸೋದರರೊಳ್ ಸೋದರರಂ
ಕಾದಿಸುವುದು ಸುತನ ತಂದೆಯೆಡೆಯೊಳ್ ಬಿಡದು
ತ್ಪಾದಿಸುವುದು ಕೋಪಮನಗಳ
ವೀ ದೊರೆತೆನೆ ತೊಡರ್ವುದೆಂದು ರಾಜ್ಯಶ್ರೀಯೊಳ್

ಛೇ! ಈ ರಾಜ್ಯಮೋಹ ಎಷ್ಟು ಕೆಟ್ಟದ್ದು. ಸೋದರರಲ್ಲಿ ವೈರವನ್ನು ಬಿತ್ತುತ್ತದೆ; ತಂದೆ ಮಕ್ಕಳಿಗೆ ವಿರಸವನ್ನು ತಂದೊಡ್ಡುತ್ತದೆ; ಈ ಒಡಲು, ಈ ರಾಜ್ಯ ಯಾವುದೂ ಶಾಶ್ವತವಲ್ಲ; ವಿಷಯ ಸುಖಗಳಿಂದ ದುರಂತ ತಪ್ಪಿದ್ದಲ್ಲ; ಇವುಗಳನ್ನು ನಂಬುದೆಂತು ಎಂದು ಅವನು ಆಲೋಚಿಸಿದ.

ಇನಿಯವು ಮೊದಲೊಳ್ ನಂಜಿನ
ಪನಿವೊಲ್ ಬಜಿಕೆಯ್ದೆ ಮುಳಿದು ಕೊಂದಿಕ್ಕುವುವಿಂ
ತೆನೆಯೆನೆ ವಿಷಯಸುಖಾಸ್ವಾ
ದನದೊಳ ಲಂಪಟರಿದೇಕೆಯೋ ನರಪಶುಗಳ್

ಎಂದು ವಿಸ್ಮಿತನಾಗಿ "ಅತೀಂದ್ರಿಯಮೆ ಸುಖಂ" ಎಂದು ನಿರ್ಣಯಿಸುತ್ತಾನೆ. "ಜೈನ ದೀಕ್ಷೆಯಂ ಕೈಕೊಂಡು, ಅಡಿಗೆಱಗಿಸುವೆಂ ಸಮಸ್ತ ಸುರಸಮುದಯಮಂ" ಎಂದು ಅಧ್ಯಾತ್ಮ ದಿಗ್ವಿಜಯವನ್ನು ನಿಶ್ಚಯಿಸುತ್ತಾನೆ. ಭರತನ ಅಂತರಂಗದಲ್ಲಿ ನಡೆಯುತ್ತಿದ್ದ ಕೋಲಾಹಲವನ್ನು ಗಮನಿಸಿದ ಬಾಹುಬಲಿಯೇ "ಚಕ್ರೇಶ, ಸಿಗ್ಗುಟಿ, ಮುಳಿಸಂ ನೀನ್ ಎಂದಿಂಗಂ ಬಿಸುಡು, ಈ ತಮ್ಮಂದಿರೊಳ್ ಇಂತು ಕಡ್ಡರಪ್ಪುದು ಪೆಂಪೇ" ಎಂದು ಭರತನಿಗೆ ಸಮಾಧಾನದ ನುಡಿ ನುಡಿಯುತ್ತಾನೆ.

ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಳಂ ಈ ಭಟಖಡ್ಗಮಂಡಲೋ
ತ್ಪಲವನ ವಿಭ್ರಮಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ ಭೂ
ವಲಯಮನಯ್ಯನಿತ್ತುದುಮನಾಂ ನಿನಗಿತ್ತೆನಿದೇವುದಣ್ಣ ನೀ
ನೊಲಿದ ಲತಾಂಗಿಗಂ ಧರೆಗಮಾಟಿಸಿದಂದು ನೆಗಟ್ತೆ ಮಾಸದೇ

"ಮರೆವುದೆನ್ನ ದುರ್ವಿಳಸನಮಂ" ಎಂದ ಬಾಹುಬಲಿಯ ಕ್ಷಮಾಪ್ರಾರ್ಥನೆ-ಯನ್ನೂ ಅವನ ತಪೋನಿರ್ಧಾರವನ್ನೂ ಕೇಳಿದ ಭರತನ ಹೃದಯದಲ್ಲಿ ಪಶ್ಚಾತ್ತಾಪ ಉಕ್ಕಿಬರುತ್ತದೆ. ನನ್ನ ಪಾಲಿಗೆ ಉಳಿದಿರುವವನು ನೀನೊಬ್ಬನೆ ತಮ್ಮ; ತಪಸ್ಸಿಗೆ ಹೋಗಬೇಡ ಎಂದು ವಿನಂತಿಸಿಕೊಳ್ಳುತ್ತಾನೆ. ಆದರೆ ಬಾಹುಬಲಿ ಅವನನ್ನು ಒಪ್ಪಿಸಿ ಆದಿದೇವನಲ್ಲಿ ದೀಕ್ಷೆ ಪಡೆದು ತಪೋನಿರತನಾಗಿ ಕೇವಲಜ್ಞಾನ ಸಂಪಾದಿಸುತ್ತಾನೆ. ಬಾಹುಬಲಿಯಿಂದ ಒಳ್ಳೆಯ ಪಾಠ ಕಲಿತ ಭರತ ಧರ್ಮದಿಂದ ರಾಜ್ಯಭಾರಮಾಡಿ, ಆದಿತೀರ್ಥಂಕರನ ನಿರ್ವಾಣವಾದ ಮೇಲೆ ದೀಕ್ಷೆ ವಹಿಸಿ ತಪವನ್ನಾಚರಿಸಿ ಮುಕ್ತಿ ಪಡೆಯುತ್ತಾನೆ.

ಈ ಪ್ರಸಂಗದಲ್ಲಿ ಬಾಹುಬಳಿಯ ಲೋಕಾಶ್ಚರ್ಯಕರವಾದ ತ್ಯಾಗ, ವಿರಾಗ, ಔದಾರ್ಯ, ಕ್ಷಮಾ ಗುಣಗಳು ಮುಗಿಲುಮುಟ್ಟಿವೆ. ಅವನ ವ್ಯಕ್ತಿತ್ವ ಭರತನನ್ನು ಪರಿವರ್ತಿಸಿತು. ವಿಜಯೋನ್ಮತ್ತನಾಗಬೇಕಾದ ಗಳಿಗೆಯಲ್ಲಿ ಬಾಹುಬಲಿ ಮೆರೆಯುವ ತ್ಯಾಗಕ್ಕೆ ಮೂರುಲೋಕಗಳ ಬೆಲೆಯಿದೆ. ಜಿ.ಎಸ್.ಶಿವರುದ್ರಪ್ಪನವರು ಗುರುತಿಸಿದಂತೆ "ವಿಜಯದ ತುತ್ತತುದಿಯಲ್ಲೇ ಆ ವೈಭವದ ಸುವರ್ಣ ಮಂದಿರವನ್ನೆ ತನ್ನ ತ್ಯಾಗದ ತ್ರಿವಿಕ್ರಮ ಪಾದದಿಂದ ಪುಡಿಗೈದು ಮುಗಿಲೆತ್ತರ ನಗ್ನಯೋಗದಲ್ಲಿ ನಿಲ್ಲುವ ಶಾಂತ ದಿವ್ಯ ದೃಶ್ಯವನ್ನು ಕಾಣುತ್ತೇವೆ. "ಬಾಹುಬಲಿಯ ತ್ಯಾಗ ದೌರ್ಬಲ್ಯಮೂಲವಾದುದಲ್ಲ; ಅವನದು ಹೇಡಿಯ ಕ್ಷಮೆಯಲ್ಲ. ನಿಜವಾದ ಅಹಿಂಸೆಯನ್ನು ಅವನ ಅಪೂರ್ವ ವರ್ತನೆಯಲ್ಲಿ ಕಾಣಬಹುದು. ವೈರವು ವೈರದಿಂದ ಶಾಂತವಾಗದು. ಅವೈರದಿಂದ ಮಾತ್ರವೇ ಶಾಂತವಾಗುತ್ತದೆ ಎಂಬಂತೆ ಅವನು ದ್ವೇಷಾಸೂಯೆಗಳನ್ನು ಪ್ರೀತಿ

ಅಹಿಂಸೆಗಳಿಂದ ಕ್ಷಣಮಾತ್ರದಲ್ಲಿ ಗೆದ್ದ. ಭರತನಂತೆ ಅವನೂ ಚಲವನ್ನೆ ಮುಂದೊಡ್ಡಿ, ಕಡೆಯತನಕ ಹಗೆತನವನ್ನೇ ಸಾಧಿಸಲು ಹೊರಟಿದ್ದರೆ ಅಣ್ಣತಮ್ಮಂದಿರ ವೈರದ ಸೂತ್ರ ಭವ ಭವಗಳಲ್ಲಿ ನಿರಂತರವಾಗಿ ಹರಿದು ಅವರನ್ನು ಬಲಿ ತೆಗೆದುಕೊಳ್ಳುತ್ತಿತ್ತು. ಬಾಹುಬಲಿ ಅದಕ್ಕೆ ಅಸ್ಪದವೀಯದೆ ಹಿಂಸೆಯ ದುರಂತವನ್ನು ತಪ್ಪಿಸಿ ಅಹಿಂಸೆಯಿಂದ ಆತ್ಮಕಲ್ಯಾಣವನ್ನೂ ಜಗತ್ಕಲ್ಯಾಣವನ್ನೂ ಸಾಧಿಸಿದ. ಈರ್ಷ್ಯೆಯಿಂದ ಸ್ಪರ್ಧೆಗಿಳಿದವರಲ್ಲಿ ಒಬ್ಬರಾದರೂ ಹಿಂದೆಗೆದರೆ ಅಹಿಂಸೆಯಿಂದ ಎಂತಹ ಶುಭೋದಯವಾಗಬಲ್ಲುದು ಎನ್ನುವುದಕ್ಕೆ ಈ ಪ್ರಸಂಗ ಸಾಕ್ಷಿಯಾಗುತ್ತದೆ. ವೃಷಭಾಚಲದಲ್ಲಿ ಪ್ರಶಸ್ತಿ ಲೇಖನಗಳನ್ನು ನೋಡಿ ನಾಚಿದರೂ ವಿರಕ್ತನಾಗದ ಭರತನಿಗೆ ಬಾಹುಬಲಿಯ ಪರಿವರ್ತನೆ ಕಣ್ತೆರೆಯುತ್ತದೆ. ಆದಿದೇವನ ವಿರಕ್ತಿ ಮನಃಪರಿಪಾಕಗಳು ದೀರ್ಘಾವಧಿಯ ಸಾಧನೆಯಿಂದ ಕ್ರಮಶಃ ಲಬ್ಧವಾದ ಫಲಗಳು. ಆದರೆ ಬಾಹುಬಲಿಯ ವಿಷಯ ಹಾಗಲ್ಲ. ಅವನದು ಪ್ರಬುದ್ಧ ಪರಿಣತ ಚೇತನ; ಅವನು ಇದ್ದಕ್ಕಿದ್ದಂತೆಯೆ ವೈರಾಗ್ಯಪರನಾಗಿ, ಉಟ್ಟ ಬಟ್ಟೆಯನ್ನು ಕಿತ್ತೆಸೆಯುವಷ್ಟು ಸುಲಭವಾಗಿ ಸಲೀಸಾಗಿ ವಿಜಯವನ್ನು ತೃಣೀಕರಿಸುತ್ತಾನೆ; ಭರತನಾದರೊ ಇವರಬ್ಬರಿಗಿಂತ ಭಿನ್ನನಾದ ವ್ಯಕ್ತಿ; ಅವನಿಗುಂಟಾಗುವ ವೈರಾಗ್ಯಸ್ಪರ್ಶ ಪರೋಕ್ಷವಾದದ್ದು. ಬಾಹುಬಲಿಯ ಮಹಿಮೆ ಔನ್ನತ್ಯಗಳ ಸಂದರ್ಶನದಿಂದ ಬಂದದ್ದು. ಹೀಗೆ ವೈರಾಗ್ಯದ ಮೂರು ಪರಿಗಳನ್ನು ಪಂಪ ಆದಿಪುರಾಣದಲ್ಲಿ ನಿರೂಪಿಸುವಂತೆ ತೋರುತ್ತದೆ. ಈ ಮಾರ್ಗದಿಂದಲಾದರೂ ಜೀವ ಉದ್ಧಾರಗೊಳ್ಳಬಹುದು. ಈ ವೈರಾಗ್ಯ ನಿರೂಪಣೆಯ ಮೂಲಕ 'ಸಂಸಾರದಲ್ಲಿ ಬಿದ್ದ ಜೀವನು ಸಂಸಾರವನ್ನೇ ಹಿಡಿದು ಮೇಲೆದ್ದು' ಸಿದ್ಧನಾಗಬೇಕಾದ ಬಗೆಯನ್ನು ಪಂಪ ಮನದಟ್ಟು ಮಾಡಿಸಿದ್ದಾನೆ. ಸಂಸಾರ ಸಂಪೂರ್ಣವಾಗಿ ತ್ಯಾಜ್ಯವಲ್ಲ; ಆದರೆ ಅದೇ ನಿಲ್ದಾಣವಾಗಬಾರದು. ಇಹದಲ್ಲಿ ಅಂಟಿಯೂ ಅಂಟದಂತೆ ಬದುಕುವ ಅನಾಸಕ್ತಿ ಯೋಗವನ್ನು ಕಲಿಯಬೇಕು. ಬೇಡವೆನಿಸಿದಾಗ ಲೌಕಿಕ ಭೋಗ ವೈಭವಗಳನ್ನೆಲ್ಲ ವಿಸರ್ಜಿಸಿ ದಿಗಂಬರನಾಗುವ ಸಂಸ್ಕಾರವನ್ನು ಸಂಪಾದಿಸಬೇಕು.

## ಅಧ್ಯಾಯ – ೩

# ರತ್ನಾಕರವರ್ಣಿಯ ಭರತೇಶ ವೈಭವದ ಸ್ಥೂಲ ಪರಿಚಯ

'ರತ್ನಾಕರವರ್ಣಿ' ಸಾಂಗತ್ಯದ ಸೀಮಾಪುರುಷನೆಂದು ವಿಖ್ಯಾತನಾಗಿದ್ದಾನೆ. ಇವನೊಬ್ಬ ಜೈನಕವಿ. ಮಧ್ಯಕಾಲೀನ ಕನ್ನಡ ಸಾಹಿತ್ಯದ ಪ್ರಮುಖ ಕವಿಯಾಗಿದ್ದಾನೆ. ರತ್ನಾಕರನ ಕಾಲ ಹೆಚ್ಚಿನ ತೊಡಕಿಗೆ ಗುರಿಯಾಗಿಲ್ಲ. ಆದರೆ ಉಪಲಬ್ಧ ಆಧಾರಗಳ ಮೇಲೆ ವಿದ್ವಾಂಸರು ಸ್ವಲ್ಪಮಟ್ಟಿನ ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವುಗಳ ಹಿನ್ನೆಲೆಯಲ್ಲಿ ಇಲ್ಲಿ ಕವಿಯ ಕಾಲವನ್ನು ಚರ್ಚಿಸಬಹುದು: ಪದ್ಯಗಳ ಆಧಾರದ ಮೇಲೆ ಇವನ ಕಾಲವನ್ನು ೧೫ ಮತ್ತು ೧೬ನೆಯ ಶತಮಾನವೆಂದು ಸೂಚಿಸಿದ್ದರು. ಆದರೆ ಅವರು ಉಲ್ಲೇಖಿಸಿರುವ ಪದ್ಯಗಳು ಲಿಪಿಕಾರ ಕೃತಿಯನ್ನು ಪ್ರತಿಮಾಡಿದ ಕಾಲ ಎಂಬುದನ್ನು ಗಮನಿಸದೆ ರತ್ನಾಕರನ ಕಾಲವನ್ನು ಕ್ರಿ.ಶ.೧೬೬೦ ಎಂದು ಹೇಳಿದರು. 'ರಾಜಾವಳಿ ಕಥಾಸಾರ'ದ ದೇವಚಂದ್ರನ ಪ್ರಕಾರ ರತ್ನಾಕರ ಬೈರರಸ ಒಡೆಯರ ಸಭೆಯೊಳಗೆ ಶೃಂಗಾರ ಕವಿ' ಎಂದು ಹೆಸರು ಪಡೆದವನು. ರತ್ನಾಕರನ ಕಾಲದ ಬಗ್ಗೆ ದೇವಚಂದ್ರ ಕೆಲವು ಸಂಗತಿಗಳನ್ನು ದಾಖಲಿಸಿದ್ದಾನೆ. ವಿಜಯಕೀರ್ತಿಗಳೆಂಬ ಪಟ್ಟಾಚಾರ್ಯರ ಶಿಷ್ಯರಾದ ವಿಜಯಣ್ಣನ 'ದ್ವಾದಶಾನುಪ್ರೇಕ್ಷೆ'ಯನ್ನು ಆನೆಯ ಮೇಲೆ ಮೆರವಣಿಗೆ ಮಾಡಿಸಿದಾಗ ೮೪ ಸಂಧಿಗಳ 'ಭರತೇಶ ವೈಭವ'ವನ್ನು ಆನೆಯ ಮೇಲೆ ಮೆರವಣಿಗೆ ಮಾಡಿಸಬೇಕೆಂದಾಗ ಪಟ್ಟಾಚಾರ್ಯ ಒಪ್ಪಲಿಲ್ಲ. ಇದರಿಂದ ಬೇಸತ್ತು ರತ್ನಾಕರವರ್ಣಿ ವೀರಶೈವಧರ್ಮವನ್ನು ಸ್ವೀಕರಿಸಿ ನಂತರ ಜೈನಧರ್ಮಕ್ಕೆ ಹಿಂದುರಿಗಿದ. ನಂತರ ಶತಕತ್ರಯಗಳನ್ನು ೨೦೦೦ದಷ್ಟು ಆಧ್ಯಾತ್ಮಗೀತೆಗಳನ್ನು ಬರೆದನು. ಶಕವರುಷ ೧೪೭೯ಕ್ಕೆ ಸಂಧಿರುವುದು. ರಾಜ ಒಡೆಯರ ಕಾಲವಾದ ಮೇಲೆ ಚಾಮರಾಜರ ಕಾಲದಲ್ಲಿ ಕವಿಯಿಂದ ರತ್ನಾಕರನ 'ಭರತೇಶವೈಭವ' ಓದಲ್ಪಟ್ಟಿತು.

೧) ರತ್ನಾಕರ ಬೈರಸ ಒಡೆಯರ ಆಶ್ರಯದಲ್ಲಿದ್ದ.

೨) ದ್ವಾದಶಾನುಪ್ರೇಕ್ಷೆಯನ್ನು ಬರೆದ ವಿಜಯಣ್ಣನ ಸಮಕಾಲೀನರು

೩) ಈ ವಿಜಯಣ್ಣ ವಿಜಯಕೀರ್ತಿ ಪಟ್ಟಾಚಾರ್ಯರ ಶಿಷ್ಯ

೪) ಚಾಮರಾಜ ಒಡೆಯರ ಕಾಲದಲ್ಲಿ ಭರತೇಶ್ವರ ಚರಿತ್ರೆಯನ್ನು ಓದಿದ್ದು.

ಇವನ ಕಾಲ ೧೪೫೭. ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದಿರೆ ಇವನ ಹುಟ್ಟೂರು. ಚಾರುಕೀರ್ತಿ ಇವನ ಗುರು. ದೇವಚಂದ್ರನೆಂಬ ಕವಿಯ ರಾಜಾವಳಿ ಕಥೆ ಎಂಬ ಗ್ರಂಥದಲ್ಲಿ ರತ್ನಾಕರವರ್ಣಿಯ ಜೀವನ ವಿವರಗಳು ದೊರಕುತ್ತದೆ.

ರತ್ನಾಕರವರ್ಣಿಯು ರಾಜನೊಬ್ಬನ ಆಸ್ಥಾನದಲ್ಲಿ ಶೃಂಗಾರ ಕವಿಯಾಗಿದ್ದು ರಾಜನ ಮಗಳನ್ನು ಮೋಹಿಸಿ ಸ್ನೇಹ ಮಾಡಿಕೊಂಡನು. ಇದು ರಾಜನಿಗೆ ಗೊತ್ತಾಗಿ ಹಿಡಿಯಲು ಬಂದಾಗ ಯೋಗ ಬಲದಿಂದ ಅಟ್ಟವನ್ನು ಏರಿ ತಪ್ಪಿಸಿಕೊಂಡು ಅನಂತರ ಓಡಿಹೋಗಿ ಅಣುವ್ರತ ದೀಕ್ಷೆ ಪಡೆದು ಜೈನ ಸನ್ಯಾಸಿಯಾಗುತ್ತಾನೆ. ಆತ್ಮಜ್ಞಾನಿಗೆ ಜಾತಿಕುಲ ಯಾವುದಾದರೂ ಒಂದೇ ಸಮ ಎಂದು ಲಿಂಗಧಾರಣೆ ಮಾಡಿಕೊಂಡು ವಿರಶೈವವಾಗಿ ವೀರಶೈವಶಾಸ್ತ್ರಗಳನ್ನು ಓದಿ ಆನಂತರ ಕೋಪಶಾಂತವಾದ ಮೇಲೆ ಮತ್ತೆ ಜೈನಧರ್ಮಕ್ಕೆ ಮರಳುತ್ತಾನೆ. ಒಟ್ಟಿನಲ್ಲಿ ಕವಿ ಶೃಂಗಾರಪ್ರಿಯನೂ, ಸ್ವತಂತ್ರಪ್ರಜ್ಞೆಯುಳ್ಳವನೂ ಆಗಿದ್ದನೆಂದೂ ಇದರಿಂದ ತಿಳಿದುಬರುತ್ತದೆ.

ಇವನು ತನ್ನ ಸ್ವಂತ ವಿಚಾರವನ್ನು ಎಲ್ಲಿಯೂ ಹೇಳಿಲ್ಲ, ಹೇಳಿಕೊಂಡಿಲ್ಲ. ಬಹುಶಃ ಅತ್ಯಂತ ಚಿಕ್ಕ ವಯಸ್ಸಿನಲ್ಲೇ ಲೌಕಿಕ ಬದುಕನ್ನು ಬಿಟ್ಟು ಪಾರಲೌಕಿಕ ಚಿಂತನೆಯಲ್ಲಿ ತೊಡಗಿರಬೇಕೆಂದು ತೋರುತ್ತದೆ. ಏಕೆಂದರೆ ಅವನನ್ನು ರತ್ನಾಕರವರ್ಣಿ, ರತ್ನಾಕರಾರ್ಯ, ರತ್ನಾಕರ ಅಣ್ಣ, ರತ್ನಾಕರ ಸಿದ್ಧನೆಂದು ಅನೇಕ ಪರ್ಯಾಯ ನಾಮಗಳಿಂದ ಜನರು ಗುರುತಿಸುತ್ತಿದ್ದರು. ಕವಿಯು ತನ್ನೂರಿನ ಬಗ್ಗೆ ಹೆಚ್ಚಿಗೆ ಏನನ್ನೂ ಹೇಳದಿದ್ದರೂ, ತಾನು ಕ್ಷತ್ರಿಯ ವಂಶಜನೆಂದೂ, ಕರ್ಣಾಟ ಸುಕ್ಷೇತ್ರದವನೆಂದೂ ಸ್ಪಷ್ಟಪಡಿಸಿದ್ದಾನೆ. ದೇವಚಂದ್ರನ ಪ್ರಕಾರ ಇವನು ತುಳುವ ದೇಶದ ಮೂಡಬಿದಿರೆಯ ಸೂರ್ಯವಂಶದರಸು. ದೇವರಾಜನ ಪುತ್ರ, ಕಾವ್ಯ, ಅಲಂಕಾರ, ಲಕ್ಷಣಶಾಸ್ತ್ರಗಳಲ್ಲಿ ನಿಪುಣನಾದವನು. ಕುಂದಕುಂದರ ಪರಂಪರೆಯ ಆಧ್ಯಾತ್ಮಗ್ರಂಥವನ್ನು ಅಭ್ಯಾಸ ಮಾಡಿದವನು. ರತ್ನಾಕರ 'ಭರತೇಶವೈಭವ'ದಲ್ಲಿ ತಾನು ಕರ್ನಾಟಕವನೆಂದು ಹೇಳಿ-ಕೊಂಡಿದ್ದಾನೆ. ಈತನ ದೀಕ್ಷಾಗುರು ಚಾರುಕೀರ್ತಿ.

ಇವನ ಕೃತಿಗಳಲ್ಲಿನ ಆಧಾರಗಳನ್ನೂ, ಇತರ ಕೃತಿಕಾರ ಹೇಳಿಕೆಗಳು ಹಾಗೂ ಶಾಸನಗಳ ನೆರವಿನಿಂದಲೂ ಇವನ ಕಾಲವನ್ನು ನಿರ್ಣಯಿಸಬೇಕಾಗಿದೆ. ಮೊತ್ತಮೊದಲ ಬಾರಿಗೆ ರತ್ನಾಕರನ, ರತ್ನಾಕರಾಧೀಶ್ವರ ಶತಕ ಮತ್ತು 'ಅಪರಾಜಿತೇಶ್ವರ ಶತಕಗಳನ್ನು ಎಸ್.ಜಿ.ನರಸಿಂಹಾಚಾರ್ ಹಾಗೂ ಎಂ.ಎ.ರಾಮಾನುಜಯ್ಯಂಗಾರ್ ಅವರು ೧೮೯೩ ರಲ್ಲಿ ಬೆಳಕಿಗೆ ತಂದರು. ಇದರ ಬಗ್ಗೆ ಆಗಾಗ್ಗೆ ಹೆಚ್ಚಿನ ಅಧ್ಯಯನಕ್ಕೆ ಇನ್ನೂ ಯಾರೂ ಕೈಹಾಕಿರಲಿಲ್ಲವೆಂದು ತೋರುತ್ತದೆ.

'ವಿದ್ವಾನ್ ಬ್ರಹ್ಮಸೂರಿಶಾಸ್ತ್ರೀ'ಗಳು ಈ ಕವಿಯ ಬಗ್ಗೆ ಬರೆಯುವಾಗ ಭರತೇಶ್ವರ ಚರಿತೆ ಪ್ರತಿಯಲ್ಲಿ ಬರುವ ಪದ್ಯವೊಂದರತ್ತ ವಿದ್ವಾಂಸರ ಗಮನ ಸೆಳೆದ ಭಾಗ –

ಶ್ರೀ ಶಕವರ್ಷವು ಸಾಸಿರದೈನೂರ। ಲೇಸೆಂಬತ್ತರಡನೆಯಾ।
ಶ್ರೀ ಶಾರ್ವರಿ ವರ್ಷದ ಶುಭತರನಿಜ। ವೈಶಾಖ ಶುದ್ಧ ಪಂಚಮಿಯಾ।
ಭೃಗುವಾರ ಪುನರ್ವಸು ತಾರಾಯುತಗಂಡ। ಮಿಗೆ ಯೋಗವಣಿಜಾಕರಣಾ।
ಮೃಗಪತಿ ಲಗ್ನವೆಸಗಲು ಲಿಖಿತಮಾಯ್ತು। ಸುಗುಣ ಭರತ ರಾಜ ಕೃತಿಯಂ।[೧]

ಇವೆರಡು ಪದ್ಯಗಳ ಆಧಾರದ ಮೇಲೆ ರತ್ನಾಕರನು ೧೫ನೆಯ ಶತಮಾನದ ಅಂತ್ಯದಲ್ಲಿ ಇಲ್ಲವೆ ೧೬ನೆಯ ಶತಮಾನದ ಆರಂಭಕಾಲದಲ್ಲಿ ಇದ್ದವನೆಂದು ಅಭಿಪ್ರಾಯಪಟ್ಟಿದ್ದಾರೆ.

ರಂ.ಶ್ರೀ.ಮುಗುಳಿಯವರು "ರತ್ನಾಕರನು ೧೬ನೆಯ ಶತಮಾನದ ಮಧ್ಯಭಾಗ-ದಲ್ಲಿ ವಿಜಯನಗರ ಸಾಮ್ರಾಜ್ಯವು ತನ್ನ ವೈಭವದ ಶಿಖರವನ್ನು ಮುಟ್ಟಿ ಇಳಿತಕ್ಕೆ ಹತ್ತಿರ ಬಂದಾಗ ಇವನು ಪಶ್ಚಿಮ ಕರಾವಳಿಯ ಮೂಡಬಿದಿರೆಯಲ್ಲಿ ಹುಟ್ಟಿ ಬೆಳೆದನು" ಎಂದು ಹೇಳಿದ್ದಾರೆ.

'ಭರತೇಶ ವೈಭವ' ಕೃತಿಯಲ್ಲಿ ಕೃತಿರಚನೆಯಾದ ಕಾಲವನ್ನು ಸ್ಪಷ್ಟವಾಗಿ ಹೇಳಿಲ್ಲ.

ವೃಷಭ ಮಾಸದಿ ತೊಡಗಿತು ಕುಂಭಮಾಸ ಸ। ದ್ವಿಷಯದಿ ಕೃತಿ ಪೂರ್ಣವಾಯ್ತು।
ವೃಶಭಾಂಕ ಹಂಸನಾಥನೆ ಜಯಪರಮ ಪು।ರುಷನೆ ಚಿದಂಬರ ಪುರುಷ॥

ಇಲ್ಲಿ ಕಾಲವು ಸ್ಪಷ್ಟವಾಗಿ ನಿರ್ಣಯಗೊಳ್ಳಲು ಸಹಾಯಕವಾಗುವ ಅಂಶ-ವಿರದಿದ್ದರೂ ರತ್ನಾಕರನು ತನ್ನ 'ತ್ರಿಲೋಕಶತಕ'ದಲ್ಲಿ ಹೀಗೆ ಬರೆದಿದ್ದಾನೆ.

ಮಣಿಶೈಲ ಗತಿಯಿಂದು ಶಾಲಿಶತಕಾಲಂ ಸಂದಿರತ್ತಾಳವಾಂ।
ಗಣದೊಳ್ವೇಣುಪುರಾಂಕದೊಳ್ ಸೃಜಿಸಿದಂ ರತ್ನಾಕರಾರ್ಯಂ ನಿಜೇ॥
ಕ್ಷಣ ತಾತ್ಪರ್ಯಮಿದೀ ತ್ರೀಲೋಕ ಶತಕಂ ತಾನೀಪಗಲ್ತೊಟ್ಟು ಮುಂ।
ದಣ ವೀರಾಂಗದ ಯೋಗಿ ಮುಟ್ಟುತಿಳೆಯೊಳ್ ಸಲ್ಲೀಲೆಯಿಂದೊಪ್ಪುಗುಂ॥

ಈ ವೃತ್ತದಲ್ಲಿ ಬರುವ ಪದಗಳತ್ತ ಗಮನ ಸೆಳೆದ ಪ್ರಧಾನಗುರುದತ್ತರು "ಈ ವೃತ್ತದಲ್ಲಿನ 'ಮಣಿ-ಶೈಲ-ಗತಿ-ಇಂದು' ಎಂಬ ನಾಲ್ಕು ಭೂತ ಸಂಖ್ಯೆಗಳಲ್ಲಿ ಗತಿ" ಎಂಬುದರ ಹೊರತು ಉಳಿದ ಮೂರು ಭೂತ ಸಂಖ್ಯೆಗಳ ವಿಚಾರವಾಗಿ ಯಾವುದೇ ಗೊಂದಲವೂ ಇಲ್ಲ. 'ಮಣಿ', 'ಶೈಲ' ಮತ್ತು 'ಇಂದು' ಗಳಿಗೆ ಕ್ರಮಶಃ ೯, ೭

೧. ತ.ಸು.ಶಾಮರಾಯರಿಗೆ ವಿದ್ವಾನ್ ಬ್ರಹ್ಮಚಾರಿ ಶಾಸ್ತ್ರಗಳಿಂದ ಲಭ್ಯವಾದ ಪತ್ಯಭಾಗ - ಮೂಲಕೃತಿಯಲ್ಲಿಲ್ಲ, ಪು. ೧೨೮.

ಮತ್ತು ೧ ಎಂಬ ನಿರ್ದಿಷ್ಟ ಸಂಖ್ಯೆಗಳನ್ನು ಗೊತ್ತುಪಡಿಸಲಾಗಿದೆ" ಎಂದಿದ್ದಾರೆ. ಡಾ. ತ.ಸು.ಶಾಮರಾಯರು ಇದನ್ನು ಪ್ರಸ್ತಾಪಿಸಿ "ಕವಿಯ ಕಾಲವನ್ನು ಕೊಡುವಲ್ಲಿ ಕ್ರಿ.ಶ.೧೩೭೯ ಎಂಬುದಕ್ಕೆ ಬದಲಾಗಿ ೧೪೭೯ ಎಂದು ದೇವಚಂದ್ರನು ಪ್ರಮಾದ ವಶದಿಂದ ಹೇಳಿರಬಹುದೆಂದು ತೋರುತ್ತದೆ" ಎಂದಿದ್ದಾರೆ.

ಈ ವೃತ್ತದಲ್ಲಿ ಬರುವ ಪದಗಳತ್ತ ಗಮನಸೆಳೆದ ಪ್ರಧಾನಗುರುದತ್ತರು "ಈ ವೃತ್ತದಲ್ಲಿನ 'ಮಣಿ-ಶೈಲ-ಗತಿ-ಇಂದು' ಎಂಬ ನಾಲ್ಕು ಭೂತ ಸಂಖ್ಯೆಗಳಲ್ಲಿ 'ಗತಿ' ಎಂಬುದರ ಹೊರತು ಉಳಿದ ಮೂರು ಭೂತಸಂಖ್ಯೆಗಳ ವಿಚಾರವಾಗಿ ಯಾವುದೇ ಗೊಂದಲವೂ ಇಲ್ಲ. 'ಮಣಿ', 'ಶೈಲ' ಮತ್ತು 'ಇಂದು' ಗಳಿಗೆ ಕ್ರಮಶಃ ೯, ೭ ಮತ್ತು ೧ ಎಂಬ ನಿರ್ದಿಷ್ಟ ಸಂಖ್ಯೆಗಳನ್ನು ಗೊತ್ತುಪಡಿಸಲಾಗಿದೆ" ಎಂದಿದ್ದಾರೆ. ಡಾ. ತ.ಸು.ಶಾಮರಾಯರು ಇದನ್ನು ಪ್ರಸ್ತಾಪಿಸಿ "ಕವಿಯ ಕಾಲವನ್ನು ಕೊಡುವಲ್ಲಿ ಕ್ರಿ.ಶ.೧೩೭೯ ಎಂಬುದಕ್ಕೆ ಬದಲಾಗಿ ೧೪೭೯ ಎಂದು ದೇವಚಂದ್ರನು ಪ್ರಮಾದ ವಶದಿಂದ ಹೇಳಿರಬಹುದೆಂದು ತೋರುತ್ತದೆ" ಎಂದಿದ್ದಾರೆ.

ಗೋವಿಂದ ಪೈ ಅವರು "ದೇವಚಂದ್ರನ ರಾಜಾವಳೀ ಕಥೆಯಲ್ಲಿನ ರತ್ನಾಕರವರ್ಣಿಯ ವಿಷಯಕವಾದ ಆಖ್ಯಾಯಿಕೆಯ ಕೊನೆಯಲ್ಲಿ 'ಶಕಪುರುಷ' ೧೪೭೯ ಸಂದಿರ್ದುದು' ಎಂದಿರುವಲ್ಲಿ ತ್ರಿಲೋಕ ಶತಕದಲ್ಲಿಯ 'ಮಣಿ ಶೈಲಂಗತಿಯಿಂದು' ಎಂಬ ಭೂತಸಂಖ್ಯೆಯನ್ನೇ ಸಂಖ್ಯಾ ರೂಪವಾಗಿ ಪರಿವರ್ತಿಸಿದೆ. ಎಂದು 'ಗತಿ'ಯನ್ನು ೪ ಎಂದೇ ಸೂಚಿಸುತ್ತಾರೆ. ಈ ಆಧಾರದ ಮೇಲೆ ರತ್ನಾಕರವರ್ಣಿಯ ಕಾಲವು 'ಗತಿ'ಯ ೩ ಆದರೆ ಕ್ರಿ.ಶ. ೧೪೫೭–೫೮ ಎಂದೂ 'ಗತಿ'ಯಲ್ಲಿ ೪ ಆದರೆ ಕ್ರಿ.ಶ. ೧೫೫೭–೫೮ ಎಂದೂ ಆಗುವುದೆಂದು ಊಹಿಸಬಹುದು. ಯಾರೂ ಇದರಿಂದಾಗಿ 'ಇದಮಿತ್ತಂ' ಎಂದು ಹೇಳಲು ಆಗಿಲ್ಲ.

ಇದನ್ನು ಬಿಟ್ಟರೆ ರಾಜಾವಳೀ ಕಥೆಯಲ್ಲಿ ದೇವಚಂದ್ರನ 'ರತ್ನಾಕರವರ್ಣಿಯು ವಿಜಯಣ್ಣಹು ಸಮಕಾಲೀನರೆಂದು ತೋರಿರುವುದು ಮತ್ತೊಂದು ಆಧಾರ. ಇದನ್ನು ಸ್ವಾಗತಿಸಲು ಇರುವ ಅಡ್ಡಿಯೆಂದರೆ ವಿಜಯಣ್ಣನ ಕಾಲವು ಕ್ರಿ.ಶ. ೧೫೫೦ ಎಂದು ನಿಷ್ಪಕ್ಷವಾಗಿ ಗೊತ್ತುಪಡಿಸಿರುವುದು.

ರತ್ನಾಕರವರ್ಣಿಗೆ ಆಶ್ರಯದಾತನಾಗಿದ್ದವು ಇಮ್ಮಡಿ ವೀರಭೈರವ ರಸ. ಕವಿಗೆ 'ಶೃಂಗಾರ ಕವಿ' ಎಂದು ಬಿರುದನ್ನು ಕೊಟ್ಟವನು. ಈ ಅರಸನೇ ಈ ಇಮ್ಮಡಿ ವೀರ ಭೈರವರಸನ ಕಾಲ ೧೪೫೦–೧೫೩೫ ಇದನ್ನು ಪ್ರಸ್ತಾಪಿಸಿ ಜಿ.ಬ್ರಹ್ಮಪ್ಪ ಹಾಗೂ ಹಂಪನಾರವರು 'ರತ್ನಾಕರಿಸಿದ್ದನು ೧೫೦೦ರ ನೆಲೆಯಲ್ಲಿ ಜನಿಸಿ ಸುಮಾರು ೧೫೩೦–

೧೫೩೫ರೊಳಗೆ 'ಭರತೇಶ ವೈಭವ'ವನ್ನು ೧೫೫೦-೬೦ ರೊಳಗೆ ಈ ಮೂರು ಶತಕಗಳನ್ನು ಬರೆದು ಸುಮಾರು ೧೫೬೦-೭೦ರೊಳಗೆ ಕಾಲವಾಗಿರಬಹುದು ಎಂದು ಬರೆದಿರುತ್ತಾರೆ. ರತ್ನಾಕರನ ಜಾತಕದ ರೂಪರೇಷೆಯಲ್ಲಿ ಸೂಚಿಸಿದ ಆಧಾರವನ್ನೇ ಅವಲಂಭಿಸಿದರೆ ಕವಿ ರತ್ನಾಕರವರ್ಣಿಯ ಕಾಲವನ್ನು ಸುಮಾರು ಕ್ರಿ.ಶ. ೧೫೩೨ರಿಂದ ೧೬೦೦ ಎಂದು ಹೇಳಬಹುದಾಗಿದೆ. ಕರ್ಣಾಟಕ ಕವಿ ಚರಿತೆಕಾರ ಪ್ರಕಾರವೂ ಕವಿಯ ಕಾಲವು ಕ್ರಿ.ಶ. ೧೫೫೭ ಆಗುವುದು.

ಇವೆಲ್ಲವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ರತ್ನಾಕರವರ್ಣಿಯ ಕಾಲವನ್ನು ಹದಿನೈದನೆಯ ಶತಮಾನದ ಮಧ್ಯಭಾಗದಿಂದ ಅದೇ ಶತಮಾನದ ಅಂತ್ಯದವರೆಗಿನದೆಂದು ಹೇಳಲು ಸಾಧ್ಯವಾಗುವುದು.

**ರತ್ನಾಕರವರ್ಣಿಯ ಕೃತಿಗಳು:** ರತ್ನಾಕರವರ್ಣಿಯು 'ಭರತೇಶ ವೈಭವ', 'ರತ್ನಾಕರ ಶತಕ', ಅಪರಾಜಿತೇಶ್ವರ ಶತಕ', 'ತ್ರಿಲೋಕ ಶತಕ' ಗಳನ್ನು ಕೆಲವು ಹಾಡುಗಳನ್ನು ಬರೆದಿದ್ದಾನೆ. ಆದರೆ ಕನ್ನಡ ಕಾವ್ಯ ಪರಂಪರೆಯಲ್ಲಿ ಕಲಾತ್ಮಕ ಕಾವ್ಯವಾಗಿ ಜನಮನ್ನಣೆ ಗಳಿಸಿದ್ದು ಭರತೇಶವೈಭವವೇ ಏಕೆಂದರೆ ಉಳಿದವು ಶುದ್ಧ ಜೈನಧಾರ್ಮಿಕ ಕಾವ್ಯವಾಗಷ್ಟೇ ಪಾರಾಯಣಕ್ಕೆ ಜನಪ್ರಿಯತೆಗೆ ಒಳಗಾದಂಥವು.

**ರತ್ನಾಕರ ಶತಕಕ್ಕೆ 'ರತ್ನಾಕರಾಧೀಶ್ವರ ಶತಕ'** ಎಂಬ ಹೆಸರೂ ಇದೆ. ರತ್ನಾಕರನು ಶತಕದ ಅಂಕತನಾಮವಾಗಿ ಹಾಗೆ ಬಳಸಿರುವುದೇ ಇದಕ್ಕೆ ಕಾರಣ. ಇದರಲ್ಲಿ ಸ೧೨೭ ವೃತ್ತಗಳು ಒಂದು ಕಂದಪದ್ಯವೂ ಇದೆ.

**ತ್ರಿಲೋಕ ಶತಕದಲ್ಲಿ** ಜೈನಮತಾನುಸಾರವಾಗಿ ಪ್ರಪಂಚ ಸ್ಥಿತಿ ಇಲ್ಲವೆ ಸೃಷ್ಟಿಶಾಸ್ತ್ರವನ್ನು ಹೇಳಲಾಗಿದೆ. ಇದರಲ್ಲಿ ೧೦೦ಕ್ಕೂ ಹೆಚ್ಚು ಕಂದ ಪದ್ಯಗಳಿವೆ.

**ಅಪರಾಜಿತೇಶ್ವರ ಶತಕದಲ್ಲಿಯೂ** ಅಷ್ಟೇ ಕಂದಪದ್ಯಗಳಿದ್ದು ಅದರಲ್ಲಿ ನೀತಿ ವೈರಾಗ್ಯ ಆತ್ಮ ವಿಚಾರಗಳು ಅಡಕವಾಗಿದೆ. ಆಧ್ಯಾತ್ಮ ಮತ್ತು ವೇದಾಂತವನ್ನು ನಿರೂಪಿಸುವ ಇದರಲ್ಲಿ ೧೨೮ ವೃತ್ತಗಳಿವೆ. ಇಲ್ಲೂ ರತ್ನಾಕರ ಶತಕದಂತೆ ಆತ್ಮ ನಿವೇದನೆಯ ರೀತಿಯಲ್ಲೇ ವಿಷಯ ಪ್ರತಿಪಾದನೆ ಮಾಡಲಾಗಿದೆ. ಅಪರಾಜಿತೇಶ್ವರ ಎಂಬುದು ಇಪ್ಪತ್ತನೆಯ ತೀರ್ಥಂಕರ ಅಜಿತವೀರ್ಯನ ಪರ್ಯಾಯ ಹೆಸರು.

ರತ್ನಾಕರವರ್ಣಿಯ ಶ್ರೇಷ್ಠ ಕೃತಿಯೆಂದರೆ ಭರತೇಶ ವೈಭವ. ಜಿನಸೇನನ ಪೂರ್ವಪುರಾಣವೆಂಬ ಸಂಸ್ಕೃತ ಗ್ರಂಥ. ಪಂಪನ ಆದಿಪುರಾಣ, ಚಾವುಂಡರಾಯನ ಚಾವುಂಡರಾಯಪುರಾಣ ಇವರ ಕೃತಿಗಳಲ್ಲಿ ಮೊದಲನೆಯ ತೀರ್ಥಂಕರನಾದ ಪುರುದೇವನ ವಿಷಯ ಹಾಗೂ ಅವನ ಮಕ್ಕಳಾದ ಭರತ, ಬಾಹುಬಲಿಯ ಚರಿತ್ರೆ

ಬಂದಿದೆ. ಆದರೆ ಭರತನನ್ನೇ ಕಥಾನಾಯಕನನ್ನಾಗಿ ಮಾಡಿಕೊಂಡು ವಿಸ್ತಾರವಾಗಿ ವಿವರಿಸಿದ ಕೀರ್ತಿ ರತ್ನಾಕರವರ್ಣಿಗೆ ಸಲ್ಲುತ್ತದೆ. ಕಥೆಗಾಗಿ ಆತ ಯಾರಿಗೆ ಋಣಿಯಾಗಿದ್ದರೂ ಸರಿಯೋ ಅವುಗಳನ್ನು ಮೀರಿದ ಅದ್ಭುತ ದರ್ಶನ ಭರತೇಶವೈಭವದಲ್ಲಿದೆ. ೮೦ ಸಂಧಿಗಳು, ಸುಮಾರು ೧೦ ಸಾವಿರ ಸಾಂಗತ್ಯಗಳೂ ಇರುವ ಈ ಕಾವ್ಯವನ್ನು ಅವನು ೬ ತಿಂಗಳಲ್ಲಿ ಬರೆದದ್ದು ಒಂದು ಆಶ್ಚರ್ಯವೇ ಸರಿ.

**ರತ್ನಾಕರನ ಹಾಡುಗಳು:** ರತ್ನಾಕರನ ಹಾಡುಗಳು, ಅಣ್ಣನ ಹಾಡುಗಳು, ಅಣ್ಣನ ಪಗಳು ಆಧ್ಯಾತ್ಮ ಗೀತೆಗಳು ರತ್ನಾಕರನ ಕೀರ್ತನೆಗಳು ಇತ್ಯಾದಿ ಹೆಸರಿನಿಂದ ಬಳಕೆಯಲ್ಲಿವೆ. ರತ್ನಾಕರನ ಕಾಲದ ಜೈನಧರ್ಮ ವಿಚಾರಕ್ಕೆ ಇಳಿಮುಖದ ಕಾಲವಾಗಿದ್ದು, ರಾಜಾಶ್ರಯಗಳು ತಪ್ಪಿ, ಜನಸಾಮಾನ್ಯರೇ ಜೈನಧರ್ಮವನ್ನು ಅರಿತುಕೊಳ್ಳಬೇಕಾದ ಅನಿವಾರ್ಯತೆ ಇತ್ತು. ದ್ವೈತ, ವಿಶಿಷ್ಟಾದ್ವೈತ, ಸಿದ್ಧಾಂತಗಳ ಹಾವಳಿ, ವೀರಶೈವ ಧರ್ಮದ ಪ್ರಭಾವ ಎಲ್ಲ ಧರ್ಮದವರನ್ನು ಸಮಾನವಾಗಿ ಕಾಣಬೇಕಾದ ಪೋಷಿಸಬೇಕಾದ ರಾಜಕೀಯ ಬಿಕ್ಕಟ್ಟನ್ನು ವಿಜಯನಗರದ ಅರಸರು ಎದುರಿಸಬೇಕಾದ ಸ್ಥಿತಿ ಇಷ್ಟು ಸಾಲದೆಂಬಂತೆ ಮುಸ್ಲಿಂರ ಆಕ್ರಮಣ ಹೀಗೆ ಒಟ್ಟಾರೆಯಾಗಿ ರಾಜಕೀಯ, ಸಾಮಾಜಿಕ ಪರಿಸರವೇ ಜೈನಧರ್ಮವನ್ನು ಉದಾಸೀನ ಮಾಡಿದ ಸಂದರ್ಭವದು. ಹೀಗಿದ್ದೂ ಕರಾವಳಿಯ ಸಾಮಂತ ರಾಜರು ಮಾತ್ರ ಜೈನ ಧರ್ಮವನ್ನು ಪ್ರೀತಿಯಿಂದ ಪೋಷಿಸಿದ್ದರು. ವಿಜಯನಗರದ ಮಾಂಡಲೀಕರನೇಕರು ಜೈನ ಧರ್ಮ ನಶಿಸಿ ಹೋಗದಂತೆ ರಕ್ಷಿಸಿದ್ದರು. ಸ್ವತಃ ಜೈನಮತ ಅನುಯಾಯಿಗಳೂ ಆಗಿದ್ದರು. ಈ ಹಿನ್ನೆಲೆಯಲ್ಲಿ ಇಂತಹ ಹೊತ್ತಿನಲ್ಲಿ ರತ್ನಾಕರ ತನ್ನ 'ಭರತೇಶ ವೈಭವ' ಕೃತಿಯನ್ನು ರಚಿಸಿದನು. ಈ ಕೃತಿಯನ್ನು ಮಾತ್ರ ಬರೆಯದೆ ಹಾಡುಗಳನ್ನು ರಚಿಸಿ ಜೈನಧರ್ಮದ ತಿಳಿವಳಿಕೆಯನ್ನು ಅತ್ಯಂತ ಕೆಳವರ್ಗದವರನ್ನು ಸೇರಿಸಿಕೊಂಡಂತೆ ಜನಸಾಮಾನ್ಯರಿಗೆ ತಲುಪಿಸುವ ಕೆಲಸ ಮಾಡಿದ ಜೈನಧರ್ಮದ ಇಳಿಮುಖ ಕಾಲದಲ್ಲಿ ತಮ್ಮ ಧರ್ಮವನ್ನು ಉಳಿಸುವ ಪ್ರಯತ್ನದ ಫಲವಾಗಿ ಕವಿಗಳಿಗೂ ಸಹ ತಮ್ಮ ವಸ್ತು ಭಾಷೆ ಛಂದೋ ಬದಲಾವಣೆಗಳನ್ನು ತಂದುಕೊಂಡರು. ತನ್ನ ಧರ್ಮ ಉಳಿಸುವ ಪ್ರಯತ್ನ ಮಾಡಿದವರಲ್ಲಿ ರತ್ನಾಕರವರ್ಣಿಯೂ ಒಬ್ಬ. ಜೈನಧರ್ಮವು ಅಳಿವು ಉಳಿವಿನ ಹೋರಾಟದ ಸ್ಥಿತಿಯಲ್ಲಿದ್ದ ಸಂದರ್ಭದಲ್ಲಿ ರತ್ನಾಕರವರ್ಣಿ ತನ್ನ ಕೃತಿ ರಚಿಸಿದನು.

ಭರತ ಚಕ್ರವರ್ತಿಯ ವೈಭವದ ಬದುಕನ್ನು ಒಂದು ಮಗ್ಗುಲಿಗೆ ಸಂಸಾರದೊಳಗಿನ ವೈರಾಗ್ಯವನ್ನು ಇನ್ನೊಂದು ಮಗ್ಗುಲಿಗೆ ಇರಿಸಿದಂತೆ ರತ್ನಾಕರ ಭರತೇಶವೈಭವ ಕೃತಿಯನ್ನು ನಿರೂಪಿಸುತ್ತಾನೆ. ಇದು ಯೋಗ-ಭೋಗದ ಕಥನವಾಗಿರುವುದರಿಂದ ಭರತನ ಕಥೆ ಅವನು ಅಯೋಧ್ಯಾಪುರವನ್ನು ಆಳುತ್ತಿದ್ದಾಗಿನಿಂದ ಆರಂಭವಾಗಿ ಕೈವಲ್ಯ

ಪದವಿಯನ್ನು ಪಡೆಯುವವರೆಗೆ ವಿಸ್ತಾರಗೊಂಡಿದೆ. ಇಲ್ಲಿ ಕವಿಯು ಭರತನ ಬಾಲ್ಯದ ಬಗ್ಗೆ ಉದ್ದೇಶಪೂರ್ವಕವಾಗಿಯೇ ಮೌನ ವಹಿಸಿದ್ದಾನೆಂದು ಹೇಳಬಹುದು.

ಪ್ರಥಮ ತೀರ್ಥಂಕರ ವೃಷಭನಾಥನ ನೂರು ಮಕ್ಕಳಲ್ಲಿ ಭರತನೇ ಹಿರಿಯ ಮಗ. ಇವನು ೧೬ ನೇ ಮನು ಮಾತ್ರವಲ್ಲ. ಪ್ರಥಮ ಚಕ್ರವರ್ತಿ ಎಂಬ ಹೆಗ್ಗಳಿಕೆ ಪಾತ್ರನಾದವನು. 'ಭರತೇಶವೈಭವ' ಜೈನಪುರಾಣವೊಂದರಲ್ಲಿ ಇರಬೇಕಾದ ಜೈನಧರ್ಮ ಸಂಬಂಧವಾದ ನಿರ್ದಿಷ್ಟಪಡಿಸಿರುವ ಎಲ್ಲಾ ಅಂಶಗಳನ್ನು ಒಳಗೊಂಡಿದೆ. ಇವೆಲ್ಲವನ್ನೂ ಅದೇ ಸ್ವರೂಪದಲ್ಲಿ ಅಲ್ಲದಿದ್ದರೂ ಸಂವಾದಿರೂಪದಲ್ಲಿ ರತ್ನಾಕರ ಭರತದ ಚರಿತ್ರೆಯಲ್ಲೂ ತರುವ ಮೂಲಕ ಭರತನನ್ನು ತೀರ್ಥಂಕರರ ಸಿದ್ಧ ಕೃತಿಗೆ ಪರ್ಯಾಯವಾಗಿ ನಿಲ್ಲಿಸುವ ಪ್ರಯತ್ನವನ್ನಂತು ಮಾಡುತ್ತಾನೆ. ಉದಾಹರಣೆಗೆ ಪಂಚಕಲ್ಯಾಣಗಳಿಗೆ ಪರ್ಯಾಯವಾಗಿಲ್ಲಿ ಭೋಗವಿಜಯ, ದಿಗ್ವಿಜಯ, ಯೋಗವಿಜಯ, ಅರ್ಕಕೀರ್ತಿವಿಜಯ, ಮೋಕ್ಷವಿಜಯಗಳನ್ನು ತಂದಿರುವುದನ್ನು ಗಮನಿಸಬಹುದು.

ಇವನು ಅಯೋಧ್ಯಾ ಪಟ್ಟಣವನ್ನು ಅತ್ಯಂತ ದಕ್ಷತೆಯಿಂದ ಆಳುತ್ತಿದ್ದನು. ಸಹಸ್ರಾರು ರಾಣಿಯರಿದ್ದರಿಂದ ಸುಖ ಸಂಕಥಾವಿನೋದ ಅವನ ಬದುಕಿನ ಒಂದು ಭಾಗವೇ ಆಗಿತ್ತು. ಈ ರೀತಿ ರಾಜ್ಯಭಾರ ಮಾಡುತ್ತಿದ್ದ ಸಂದರ್ಭದಲ್ಲಿ ಆಯುಧಾ ಗಾರದಲ್ಲಿ ಚಕ್ರರತ್ನ ಉದಯಿಸಿತು. ಹೆಸರೇ ಹೇಳುವಂತೆ ಇದು ದಿಗ್ವಿಜಯ ಸೂಚಕವಾದುದು. ಅದನ್ನು ಭರತನು ಸಂಪ್ರದಾಯದ ಪ್ರಕಾರ ಪೂಜಿಸಿ, ಅದನ್ನು ಮುಂದಿಟ್ಟುಕೊಂಡು ನಿಯಮದಂತೆ ವಿಜಯದಶಮಿಯ ದಿನ ದಿಗ್ವಿಜಯ ಯಾತ್ರೆಗೆ ಹೊರಡುತ್ತಾನೆ. ಇವನ ಜೊತೆಗೆ ಮಂತ್ರಿ ಮಹೋದಯರು, ಚತುರಂಗ ಬಲಸೇನೆ ಮಾತ್ರವಲ್ಲದೆ ಅವನ ಸಹಸ್ರಾರು ರಾಣಿಯರು ಪ್ರಯಾಣ ಬೆಳೆಸುತ್ತಾರೆ.

ರತ್ನಾಕರವರ್ಣಿಯ, ಭರತನು ದಿಗ್ವಿಜಯಕ್ಕೆ ಹೊರಟಾಗ ಸಹಸ್ರಾರು ರಾಣಿಯರಿದ್ದರು ಎನ್ನುವುದೇ ಅವನ ಭೋಗವಿಜಯಕ್ಕೆ ಸಂಬಂಧಪಟ್ಟುದ್ದಾಗಿದೆ. ದಿಗ್ವಿಜಯದ ಸಂದರ್ಭದಲ್ಲಿ ಅವನು ಭೋಗಿಯಾಗಿದ್ದುದ್ದನ್ನು ಚಿತ್ರಿಸಿದ್ದಾನೆ.

ಭರತನು ದಿಗ್ವಿಜಯಕ್ಕೆ ಹೋದ ಸಂದರ್ಭದಲ್ಲಿ ಯಾತ್ರೆಯ ಉದ್ದಕ್ಕೂ ಅವನ ಶೃಂಗಾರ ಭಾವಕ್ಕೆ ಹೆಚ್ಚು ಒತ್ತು ಕೊಡುತ್ತಾನೆಯೇ ಹೊರತು ಯುದ್ಧ ಪ್ರಶಸ್ತಿಯಲ್ಲ ಕಾರಣ ಉದ್ದಕ್ಕೂ ಭೋಗಕ್ಕೆ ಸಂಬಂಧಿಸಿದ ಸುಖಪರಿಕರಣಗಳ ಪ್ರಸ್ತಾಪವೇ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಕವಿಯ ಹೇಳಿಕೆಯಲ್ಲಿ ಮಾತ್ರ ದಿಗ್ವಿಜಯ ಎಂಬುದು ಕಾಣಿಸಿಕೊಳ್ಳುತ್ತದೆ. ವಸ್ತುಸ್ಥಿತಿ ಹೀಗಿದ್ದರೂ ರಕ್ತಪಾತವಿಲ್ಲದೇ ಅನೇಕ ರಾಜರುಗಳೇ ಬಂದು ಭರತನಿಗೆ ಶರಣಾಗುತ್ತಾರೆ. ಇವನು ಬೀಡು ಬಿಟ್ಟ ಕಡೆಯಲ್ಲೆಲ್ಲಾ ಅರಮನೆ

ಕಟ್ಟಿಸುವುದು, ಮಡದಿ ಮಕ್ಕಳೊಂದಿಗೆ ಸರಸ ಸಲ್ಲಾಪ ನಿರತನಾಗುವುದು, ಉಪವಾಸಾದಿ ವ್ರತಗಳನ್ನು ಅವನು ತಪ್ಪದೇ ಆಚರಿಸುವುದು ಇತ್ಯಾದಿ ವರ್ಣನೆಗಳು, ವಿವರಗಳು ಇವನ ಕೃತಿಯಲ್ಲಿ ಕಂಡುಬರುತ್ತದೆ.

ರತ್ನಾಕರವರ್ಣಿ ಭರತನನ್ನು ರಾಜಯೋಗಿ, ಜಿನಯೋಗಿ, ತ್ಯಾಗಿ, ಭೋಗಿ, ರಸಿಕ, ವಿರಕ್ತ ಇದನ್ನು ಎದೆತುಂಬಿ ರಸವುಕ್ಕಿ ವಿವರ ವಿವರಗಳಲ್ಲಿ ರತ್ನಾಕರನು ಚಿತ್ರಿಸಿದ್ದಾನೆ. ಅವನು ಕನಸು ಕನಸಲ್ಲ, ನನಸೇ ಎಂದು ಭಾಸವಾಗುವಂತೆ ಬಣ್ಣಿಸಿದ್ದಾನೆ. ಎಲ್ಲಾ ಸಂಧಿಗಳೂ, ಎಲ್ಲಾ ಪದ್ಯಗಳೂ ಈ ಚಿತ್ರಣದ ಸ್ಥಾಯಿಗೆ ಸಹಾಯಕ ಸಾಮಗ್ರಿಯಾಗಿವೆ. ಆರಂಭದಿಂದಲೂ ಭರತೇಶನು ಅಲೌಕಿಕ ವ್ಯಕ್ತಿ ಎಂಬುದನ್ನು ಕವಿ ತಿಳಿಸುತ್ತಾನೆ.

ಮೊತ್ತಮೊದಲ ಬಾರಿಗೆ ಸಮುದ್ರ ಮಧ್ಯ ದ್ವೀಪದ ಮುಗಧನೆಂಬ ವ್ಯಂತರ ರಾಜನದ್ದು, ದಕ್ಷಿಣ ಸಮುದ್ರ ಮಧ್ಯದ ರಾಜ ವರತನುವಿದ್ದು. ಇವರಿಬ್ಬರು ಭರತನಿಗೆ ಶರಣಾಗದೇ ಯುದ್ಧಕ್ಕೆ ಸಿದ್ಧರಾದರು. ಆದರೆ ಪ್ರಜಾಕೋಟಿಗಳು ಭರತನ ಪರಾಕ್ರಮವನ್ನು ದೈವತ್ವನ್ನು, ಐಸಿರಿಯನ್ನು, ಚತುರಂಗಬಲವನ್ನು ವರ್ಣಿಸಿದ ಮೇಲೆ ತಮ್ಮ ತಪ್ಪನ್ನು ತಿದ್ದಿಕೊಂಡು ಯುದ್ಧ ಮಾಡುವ ನಿರ್ಧಾರವನ್ನು ಹಿಂತೆಗೆದುಕೊಂದು ಸಾಮಂತರಾಗುತ್ತಾರೆ. ಮೋಚ್ಛರಾಜರುಗಳನ್ನು ಭರತ ದಂಡೆತ್ತಿ ಹೋಗಿ ವಶಪಡಿಸಿಕೊಳ್ಳುತ್ತಾನೆ. ಭರತನ ಪರಿವಾರ ವಿಜಯಾರ್ಧ ಪರ್ವತದ ಕಡೆಗೆ ಸಾಗುತ್ತಾನೆ.

ಹೀಗೆ ಎಲ್ಲಾ ಕಡೆಯೂ ದಿಗ್ವಿಜಯ ಸಾಧಿಸಿಕೊಂಡು ಮತ್ತೆ ಅಯೋಧ್ಯೆಗೆ ಹಿಂತಿರುಗುವ ಮನಸ್ಸು ಮಾಡಿದನು. ದಾರಿಯಲ್ಲಿ ಕೈಲಾಸಗಿರಿಗೆ ಭೇಟಿಕೊಟ್ಟು, ಅಲ್ಲಿಯ ಜಿನನಾಥನನ್ನು ಭಕ್ತಿಯಿಂದ ಪೂಜಿಸಿದ ಮಗನು ಸುಗಮವಾಗಿ ಚೈತ್ರಯಾತ್ರೆ ಮುಗಿಸಿ ಅಯೋಧ್ಯಾಗೆ ಹಿಂತಿರುಗುತ್ತಿರುವ ಶುಭ ವಾರ್ತೆ ಕೇಳಿ ತಾಯಿ ಯಶಸ್ವತೀದೇವಿ ಮಗ ಭರತನನ್ನು ಎದುರುಗೊಳ್ಳಲು ಸಕಲ ಸಿದ್ಧತೆಯೊಂದಿಗೆ ಪುಷ್ಪಕ ವಿಮಾನವೇರಿ ಮಗನಿದ್ದಲ್ಲಿಗೆ ಬಂದಳು. ಮನಗ ಅಭೂತಪೂರ್ವ ವೈಭವ, ಸಂಸಾರ, ಸಾಧನೆ ಸಿದ್ಧಿಯನ್ನು ಕಂಡು ಹರ್ಷದಿಂದ ಮೂಕಳಾದಳು.

ಅಯೋಧ್ಯೆಯತ್ತ ಪ್ರಯಾಣ ಬೆಳೆಸಿದ ಭರತನ ಚಕ್ರರತ್ನ ಪೌರನಪುರವನ್ನು ಪ್ರವೇಶಿಸಿದ್ದೇ ತಡ ನಿಂತುಬಿಟ್ಟಿತು. ಈ ಪ್ರದೇಶವೆಲ್ಲಾ ಭರತನ ತಮ್ಮ ಬಾಹುಬಲಿ ಮತ್ತವನ ತಮ್ಮಂದಿರಿಗೆ ಸಂಬಂಧಿಸಿತ್ತು. ಅವರೆಲ್ಲಾ ಶರಣಾಗದೇ ಇವನ ದಿಗ್ವಿಜಯ ಪೂರ್ಣಗೊಳ್ಳುತ್ತಿರಲಿಲ್ಲ. ಆದ್ದರಿಂದ ಬಾಹುಬಲಿ ಬಿಟ್ಟು ಉಳಿದವರೆಲ್ಲರೂ ಅವನ

ಓಲೆ ಓದಿ ತನ್ನ ತಂದೆಯ ನೆಲವನ್ನು ಅನುಭವಿಸಲು ಈತನ ಅಪ್ಪಣೆಯನ್ನು ನಿರೀಕ್ಷಿಸುವುದು ತರವಲ್ಲವೆಂದು ಕೈಲಾಸಗಿರಿಗೆ ಹೋಗಿ ತಂದೆಯಿಂದ ದೀಕ್ಷೆ ಪಡೆದು ತಪೋನಿರತರಾದವರು. ಬಾಹುಬಲಿ ಮಾತ್ರ ವಿರುದ್ಧವಾದನು. ಭರತ ದಕ್ಷನಾಂಕನೆಂಬ ಮಹಾಚತುರ ಮಾತುಗಾರ ಮಂತ್ರಿಯನ್ನು ಕಳುಹಿಸಿದರೂ ಪ್ರಯೋಜನವಾಗಲಿಲ್ಲ. ಬಾಹುಬಲಿ ದಕ್ಷಶಾಂತನಿಗೆ ತಿರುಮಂತ್ರ ಹೇಳಿ ಕಳುಹಿಸಿಬಿಟ್ಟ. ಇದರಿಂದ ಇವರಿಬ್ಬರ ನಡುವೆ ಯುದ್ಧ ನಿಲ್ಲುವಂತಾಯ್ತು. ಆದರೆ ಅಲ್ಲಿ ರತ್ನಾಕರವರ್ಣಿಯು ತಮ್ಮನ ಮೇಲೆ ಕೈ ಮಾಡಬೇಕಾಯಿತಲ್ಲ ಎಂದು ಭರತ ಮನಸ್ಸಿನಲ್ಲೇ ಚಿಂತಿಸಿದನೆಂದು ಹೇಳಿದ್ದಾನೆ.

ಇಲ್ಲಿ ಭರತನ ಪರಾಕ್ರಮಕ್ಕೆ ಪ್ರತಿಯಾಗಿ ಒಂದು ನಿದರ್ಶನವನ್ನು ಕೊಡಬಹು-ದಾಗಿದೆ. ಭರತನಿಗೆ ನಿದ್ರೆಯಿಲ್ಲದೆ ಹಾಸಿಗೆಯಲ್ಲಿ ಹೊರಳಾಡುತ್ತಿದ್ದ ಸಂದರ್ಭದಲ್ಲಿ ಒಬ್ಬರು ಸೈನಿಕರ ಗುಜುಗುಜು ಕೇಳಿಸಿತು. ಅವರಿಬ್ಬರು ಭರತಚಕ್ರಿಯ ಪರಾಕ್ರಮವನ್ನು ಶಂಕಸುತ್ತಿದ್ದರು. "ಅನಾಥ ಸೈನ್ಯದಿಂದ ಭರತನ ಬಲ ಪ್ರದರ್ಶನ ನಿಂತಿದೆ. ಅದಿಲ್ಲದಿದ್ದಲ್ಲಿ ಅವನು ನಮ್ಮಂತೆ ಮನುಷ್ಯನೇ" ಎಂದು ಹೇಳುತ್ತಿದ್ದ. ಅವರ ಮಾತು ಭೇಡಿಸಿದಂತಾಬೇಕು. ತನ್ನ ಬಲದಿಂದ ಇಂಥವರಿಗೆ ಪ್ರದರ್ಶನ ಮಾಡಬೇಕೆಂದು ನಿರ್ಧರಿಸಿ ತನ್ನ ಕಿರುಬೆರಳೊಂದನ್ನು ಡೊಂಕು ಮಾಡಿ ಅದನ್ನು ಸರಿಮಾಡುವಂತೆ ಆಸ್ಥಾನದಲ್ಲಿಡು ಎಂದು ಸಭಿಕರಿಗೆ ಕರೆಕೊಟ್ಟ. ನೋವಿನಿಂದ ನರಳಾತ್ತಿರುವವನಂತೆ ನಾಟಕ ಮಾಡಿದ. ರಾಜವೈದ್ಯರು ಬಂದು ಪರೀಕ್ಷಿದರೂ, ಜಟ್ಟಿಗರು ಬಂದು ನೆಟ್ಟಿಗೆ ತೆಗೆದರೂ ಆ ಡೊಂಕು ಮಾಯವಾಗಿರಲಿಲ್ಲ. ಮಂತ್ರ ತಂತ್ರಗಳೂ ಪ್ರಯೋಜನಕ್ಕೆ ಬರಲಿಲ್ಲ. ಆಗ ಬಂಗಾರದ ಸರಪಣಿ ಮಾಡಿಸಿ, ಒಂದು ತುದಿಯನ್ನು ಕಿರುಬೆರಳಿಗೆ ಸಿಕ್ಕಿಸಿ, ಇನ್ನೊಂದು ತುದಿಯನ್ನು ಸೈನ್ಯಕ್ಕೆ ಕೊಟ್ಟು ಎಳೆಯುವಂತೆ ನಿಯೋಜಿಸಿದ. ಚತುರಂಗ ಬಲವೇ ಬಂದು ಎಳೆದರೂ ಕಿರುಬೆರಳು ಸರಿಯಾಗುವುದರಿರಲಿ ಕೊಂಚವೂ ಅಲುಗಾಡಲಿಲ್ಲ. ಆಗ ಗೊಣಗಿದವರಿಗೆ ಗೊತ್ತಾಯ್ತು. ಭರತನೆಂದರೆ ಯಾರು? ಎಂಬುದು. ಕೊನೆಗೆ ಭರತ ತನಗೆ ತಾನೇ 'ಗುರುಹಂಸನಾಥಾಯ ಸ್ವಾಹಾ' ಎನ್ನಲು ಕಿರುಬೆರಳು ಸರಿಹೋಯ್ತು. ಭರತ ಆ ಬಂಗಾರದ ಸರಪಣಿಯನ್ನು ತುಂಡುತುಂಡಾಗಿ ಕತ್ತರಿಸಿ ಸೈನಿಕರಿಗೆಲ್ಲಾ ಹಂಚಿಬಿಟ್ಟನು.

ರತ್ನಾಕರನು ಭರತನ ಪೂರ್ವಭವದ ಕಡೆಗೆ ಗಮನ ಹರಿಸುವುದಿಲ್ಲ. ಅದಕ್ಕೆ ಬದಲಾಗಿ ಭೋಗಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಡುತ್ತಾನೆ. ಇದಕ್ಕೆ ಕಾರಣ ಭೋಗದಿಂದ ತ್ಯಾಗದ ಕಡೆಗೆ ಅಡಿಯಿಡುವುದರಿಂದ ಅನ್ಯಧರ್ಮೀಯರನ್ನು ಆಕರ್ಷಿಸುವ ಕಾರಣದಿಂದ ಭೋಗಕ್ಕೆ ಪ್ರಥಮ ಸ್ಥಾನ ಕೊಡುತ್ತಾನೆ.

ಇವನ ಕಥಾನಾಯಕ 'ಎಂಡುಪವಾಸಿ ಬಳಸಿ ಬ್ರಹ್ಮಚಾರಿ' ಆದ್ದರಿಂದ "ಭೂಮಂಡಲವಿದ್ದು 'ನಿಸ್ಸಂಗಿಮಂಡೆ ಬೆಳೆದು ಮನ ಬೋಳಾದ ತಪಸಿ" ಇವೆರಡನ್ನು ಏಕಕಾಲದಲ್ಲಿಯೇ 'ಭೋಗವಿಜಯ'ದ ಮೂಲಕ ಭರತನಲ್ಲಿ ಸಿದ್ಧಗೊಳಿಸಲು ರತ್ನಾಕರ ಪ್ರಯತ್ನಿಸುತ್ತಾನೆ. ಹೀಗಾಗಿ ಕಥಾವಸ್ತು ನೇರವಾಗಿ ಭರತನ ರೂಪ ವರ್ಣನೆಯ ಮೂಲಕವೇ ಆರಂಭವಾಗುವುದನ್ನು ಗಮನಿಸಬೇಕು. ಭರತನನ್ನು ರತ್ನಾಕರ 'ಪುರುಪರಮೇಶನ ಹಿರಿಯ ಕುಮಾರ' ನೆಂದು ಹೇಳುತ್ತಲೇ ಮುಂದುವರೆದು ಹೀಗೆ ವರ್ಣಿಸುತ್ತಾನೆ.

ಅಂಗವಂಗಕೆ ತಕ್ಕ ಲಾವಣ್ಯ
ಲಾವಣ್ಯದಿಂಗಿತ ಪ್ರಾಯ ಪ್ರಾಯದೊಳು।
ಸಂಗಡಿಸಿದ ಸಿರಿ ಗಂಭೀರಕ್ರಮ
ಶೃಂಗಾರ ಶೋಭೆಯೊಳೆಸೆದಾ॥
ಕೋಮಲಾಂಗನು ಹೇಮವರ್ಣನು ಜಗವೆಲ್ಲ
ಕಾಮಿಸತಕ್ಕ ಚೆನ್ನಿಗನು
ಅಮೋದವುಕ್ಕುವ ಜವ್ವನಿಗನು ಸರ್ವ
ಭೂಮೀಶರೊಡೆಯನಾ ಚಕ್ರಿ॥

ಇಲ್ಲಿ ರತ್ನಾಕರ ಮುಖ್ಯವಾಗಿ ಪ್ರಸ್ತಾಪಿಸಿರುವುದು "ಕಾಮಿಸತಕ್ಕ ಚೆನ್ನಿಗನಾಗಿದ್ದು" ಭರತ ಎಂಬುದು. ಏಕೆಂದರೆ ತಾನು ಬರೆಯಲಿರುವ ಭೋಗ ವಿಜಯಕ್ಕೆ ಅವನ ರೂಪು, ಲಾವಣ್ಯ, ಯೌವನವೇ ಪ್ರಧಾನ ಧನ. ಅದನ್ನು ಬಳಸಿಕೊಂಡು ಸಾವಿರ ಸ್ತ್ರೀಯರೊಡನಾಟದ ಅನನ್ಯತೆಯನ್ನು ಕವಿ ಸಾಧಿಸಬೇಕಿದೆ. ಅಲ್ಲದೇ ಕವಿಯು ಸಂಸಾರದಲ್ಲಿದ್ದೂ ಆತ್ಮಧ್ಯಾನವನ್ನು ಭರತ ಮರೆಯಲಿಲ್ಲ ಎಂದು ಕವಿ ಹೇಳುತ್ತಾನೆ. ಪ್ರಾರಂಭದಿಂದ ಅಂತ್ಯದವರೆಗೂ ರಾಜ್ಯಸುಖದ ಮೇಲೆ ಕಥಾವಸ್ತು ಕೇಂದ್ರೀಕೃತ-ವಾಗಿದೆ. ದಿಗ್ವಿಜಯ ಸಾಧಿಸುವವನೂ ಭರತ ಯುದ್ಧ ಘಟಿಸಬಹುದಾದ ಸಂದರ್ಭ-ದಲ್ಲೂ ಉದ್ದಕ್ಕೂ ಭರತನಿಗೂ ಮದುವೆಗಳಾಗುತ್ತವೆ. ಮಡದಿಯರಂತೂ ಜೊತೆಗಿದ್ದೇ ಇರುತ್ತಾರೆ. ಮಕ್ಕಳನ್ನು ಮಡಿದಿಯರು ಹಡೆಯುತ್ತಲೇ ಇರುತ್ತಾರೆ. ಅಷ್ಟೊಂದು ಮಡದಿಯ ಮಕ್ಕಳನ್ನು ಪಡೆದೂ ಅವರಿಂದ ಭರತನಿಗೆ ತ್ರಾಸವೇ ಆಗುವುದಿಲ್ಲ. ಸ್ವಇಚ್ಛೆಯಿಂದ ದೀಕ್ಷೆ ಸ್ವೀಕರಿಸಿದಾಗಲು ಸಹಜ ಎನ್ನುವಂತೆ ಕ್ಷಣಕಾಲ ಚಿಂತಿಸಿ ನಿತ್ಯ ಬದುಕಿಗೆ ಭರತ ಹೊಂದಿಕೊಂಡೇ ಬಿಡುತ್ತಾನೆ. ಉದ್ದೇಶಪೂರ್ವಕವಾಗಿ ರತ್ನಾಕರ ಭೋಗವಿಜಯವನ್ನು ಹೆಣೆದಿದ್ದಾನೆ. ಭರತನಂಥ ಚಕ್ರವರ್ತಿಗೆ ಸರಿದೂಗಿಸಬಹುದಾದ ಭೋಗ ಪರಿಸರವನ್ನೇ ರತ್ನಾಕರ ಕೊಡುತ್ತಾನೆ.

ಭರತನ ದಿಗ್ವಿಜಯ ಪರಿಕಲ್ಪನೆ ಹೊಸತೇನು ಅಲ್ಲ. ಈ ಸನ್ನಿವೇಶ ಪ್ರಥಮ ತೀರ್ಥಂಕರನ ಚರಿತ್ರೆಯಲ್ಲಿ ಕಂಡುಬರುತ್ತದೆ. ಭರತನನ್ನು ನಾಯಕನನ್ನಾಗಿ ಮಾಡಿಕೊಂಡ ಮೇಲೆ ಎಲ್ಲಾ ಶುಭಕಾಮನೆಗಳು ಧಾರ್ಮಿಕ ಶ್ರೇಷ್ಠತೆಗಳು ಆದರಣೀಯ ಭಾವಗಳು ಭರತನಿಗೆ ಸಲ್ಲಲೇಬೇಕೆಂಬುದು ರತ್ನಾಕರನ ಹಠವಾಗಿದೆ. ಹೀಗೆ ಮಾಡದಿದ್ದರೆ 'ಭೋಗದಿಂದ ತ್ಯಾಗ ಸಾಧಿತವಾಗುವುದಿಲ್ಲ. ಇವ ಕೃತಿ ಪೂರ್ಣವಾಗುವುದಿಲ್ಲ. ಆದ್ದರಿಂದ ಪೂರ್ವ ಕವಿಗಳಿಗಿಂತ ಭಿನ್ನವಾಗಿ ಭರತನ ವ್ಯಕ್ತಿತ್ವವನ್ನು ರೂಪಿಸುತ್ತಾನೆ ರತ್ನಾಕರ.

ರತ್ನಾಕರನ ಭರತ ದಿಗ್ವಿಜಯಕ್ಕೆ ಹೋಗುವಾಗ ಪರಿವಾರದ ಜೊತೆಗೆ ಮಡದಿಯರ ಗುಂಪನ್ನು ಹೊರಡಿಸುತ್ತಾನೆ. ವಿಹಾರಧಾಮಕ್ಕೆ ತೆರಳುವಂತೆ ಸಕಲ ಸಿದ್ಧತೆಗಳ ಸಮೇತ ಸಾಗಿಸುತ್ತಾನೆ. ಸ್ವತಃ ತಾಯಿ ಯಶಸ್ವತಿಯೇ ಸೊಸೆಯಂದಿರಿಗೆ 'ಮಗನೊಡನೆ ವಿಹಾರ ಮಾಡಿಕೊಂಡು ಬನ್ನಿ' ಎಂದು ಬೀಳ್ಕೊಡುವುದನ್ನಿಲ್ಲಿ ಕಾಣಬಹುದು. ಇವನು ದಿಗ್ವಿಜಯಕ್ಕೆ ಹೊರಟ ವೀರನಂತೆ ಕಾಣುವುದಿಲ್ಲ. ದಿಟವಾಗಿ ಹೇಳಬೇಕೆಂದರೆ ಭರತ–ಬಾಹುಬಲಿಯರಿಗೆ ಯುದ್ಧ ಘಟಿಸುವುದೇ ಇಲ್ಲಿ. ವರ್ಣನೆಗೆ ಅವಕಾಶವಿದ್ದರೂ ಕವಿ ಆಸ್ಪದ ಕೊಡುವುದಿಲ್ಲ. ಏಕೆಂದರೆ ಭರತನ ವ್ಯಕ್ತಿತ್ವವನ್ನು ರತ್ನಾಕರ ಹಿರಿತನದ ಮೃದು ಮನಸ್ಸಿನ ವ್ಯಕ್ತಿಯಾಗಿ ಚಿತ್ರಿಸಿರುವುದೇ ಇದಕ್ಕೆ ಕಾರಣ. ಆದ್ದರಿಂದ ಬಾಹುಬಲಿಯ ಆರ್ಭಟಕ್ಕೆ ರತ್ನಾಕರನ ಭರತನ ತಣ್ಣನೇ ಉತ್ತರ ಕೊಡುತ್ತಾನೆ. ಮಾತ್ರವಲ್ಲ ಬಾಹುಬಲಿಯ ಮನಸ್ಸನ್ನು ಮೃದುಗೊಳಿಸುವ ಇಲ್ಲವೇ ಪರಿವರ್ತಿಸುವ ಕೆಲಸ ಮಾಡುತ್ತಾನೆ.

ಭರತನೊಡನೆ ಯುದ್ಧ ಮಾಡುವುದಕ್ಕೆ ಬಂದ ಬಾಹುಬಲಿ ವೀರನ ರೂಪದಲ್ಲಿ ಬರಲಿಲ್ಲ. ಬದಲಾಗಿ ಮನ್ಮಥನ ಸ್ವರೂಪದಲ್ಲಿ ಬಂದನು. ಅವನೊಡನೆ ಬಂದ ಚತುರ್ಬಲವನ್ನು ಸೈನ್ಯವನ್ನು ರತ್ನಾಕರನು ಪರಾಕ್ರಮದ ಜೊತೆ ಸಾದೃಶ್ಯ ಕಲ್ಪಿಸುವುದಿಲ್ಲ. ಕಾಮದೇವನ ಸಹಜ ಸಂಗತಿಗಳಾದ ದುಂಬಿ, ಗಿಳಿ, ಅಶೋಕ ವೃಕ್ಷಗಳೊಂದಿಗೆ ಸಮೀಕರಿಸಿರುವುದನ್ನು ಅವಲೋಕಿಸಿದರೆ ಸಾಕು ಭರತನಿಗೆ ಇಲ್ಲವೆ ಪರೋಕ್ಷವಾಗಿ ರತ್ನಾಕರನಿಗೆ ಯುದ್ಧವೆಷ್ಟು ಅಪ್ರಿಯವೆನಿಸುತ್ತದೆ. ಕವಿ ಯುದ್ಧ ಘಟಿಸುತ್ತದೆ ಎಂದು ಘೋಷಿಸುವುದರಿಂದ ಓದುಗರು ಇದು ಯುದ್ಧವೆಂದು ತೀರ್ಮಾನಿಸಬೇಕಾಗುತ್ತದೆ. ವಾಸ್ತವದಲ್ಲಿ ಯುದ್ಧ, ಆರ್ಭಟ, ಆಕ್ರಂದನವಾಗಲಿ ರಣರಂಗದಲ್ಲಿ ಸದ್ದು ಮಾಡುವುದೇ ಇಲ್ಲ. ಜನರೇ ಧರ್ಮಯುದ್ಧಕ್ಕೆ ಅವರನ್ನು ಒಪ್ಪಿಸಿಬಿಡುತ್ತಾರೆ. ಜನರೇ ದೃಷ್ಟಿಯುದ್ಧ, ಮಲ್ಲಯುದ್ಧ, ಜಲಯುದ್ಧ ನಡೆಯಬೇಕೆಂದು ನಿರ್ಧರಿಸುತ್ತಾರೆ. ಪರಸ್ಪರ ಹತ್ತಿರ ಬರುತ್ತಾರೆ. ಅದನ್ನು ರತ್ನಾಕರ "ಬಂಗಾರದ ಬೆಟ್ಟ ಪಚ್ಚೆಯ ಬೆಟ್ಟವನ್ನು ಸಂಧಿಸಿ–

ದಂತಾಯ್ತು" ಎಂದು ವರ್ಣಿಸಿಬಿಡುತ್ತಾನೆ. ಜನರು ಕುತೂಹಲಿಗಳಾಗಿ ಯುದ್ಧ ಘಟಿಸಿತು ಎಂದು ನಿಲ್ಲುವ ವೇಳೆಗೆ ಭರತನೇ ಆ ಯುದ್ಧವನ್ನು ಮಾತಿನ ಮೂಲಕ-ವಾಗಿಯೇ ನಿವಾರಿಸುತ್ತಾನೆ. ಬಾಹುಬಲಿಯನ್ನು ಗೆದ್ದವನೆಂದು ಘೋಷಿಸಿ, ಚಕ್ರರತ್ನಕ್ಕೆ ಅವನನ್ನು ಸೇವಿಸುವಂತೆ ಆದೇಶಿಸಿದಾಗ ಅದು ಹೋಗಲಿಲ್ಲ. ಭರತನು ಆ ಸಂದರ್ಭದಲ್ಲಿ "ನಮ್ಮ ಕಲಹಕ್ಕೆ ನೀನೇ ಕಾರಣ ತೊಲಗಾಚೆ" ಎಂದು ಚಕ್ರರತ್ನವನ್ನು ದೂಡುತ್ತಾನೆ. ಬಾಹುಬಲಿ ಭುಜಕ್ಕೆ ನೇರಬಾಗಿ ಬಂದು ಕಳೆಗುಂದಿಬಿಡುತ್ತದೆ. ಬಾಹುಬಲಿಗೆ ತನ್ನ ವ್ಯಕ್ತಿತ್ವದ ನಿಜದರಿವಾಯ್ತು: ಅಣ್ಣ ಭರತನ ಔನ್ನತ್ಯದ ಅರ್ಥವೂ ಆಯ್ತು. ಅಣ್ಣನಲ್ಲಿ ಕ್ಷಮೆ ಕೇಳಿ ಪಶ್ಚಾತ್ತಾಪ ಪಟ್ಟು ದೀಕ್ಷೆಗೆ ಸಿದ್ಧನಾಗುತ್ತಾನೆ. ಭರತನ ದಿಗ್ವಿಜಯ ಯಾತ್ರೆ ರತ್ನಾಕರವರ್ಣಿಯ ಪ್ರಕಾರ ಹೀಗೆ ಮುಕ್ತವಾಗುತ್ತದೆ.

**ಯೋಗ ವಿಜಯ ಮಸತ್ತು ಅರ್ಕ ಕೀರ್ತಿ ವಿಜಯ:** ಇವು ಕಥಾವಸ್ತುವಿಗೆ ಹೊರತಾದುದೇನು ಅಲ್ಲ. ದಿಗ್ವಿಜಯವಾದ ಮೇಲೆ ಭರತ ಆತ್ಮೋನ್ನತಿಗಾಗಿ ಜೈನಾಗಮ ಶಾಸ್ತ್ರಗಳ ಅಭ್ಯಾಸದಲ್ಲಿ ತೊಡಗುವನು. ಆ ಸಂಬಂಧವಾದ ಜೈನ ತಾತ್ವಿಕತೆಯನ್ನು ಅತ್ಯಂತ ಸರಳವಾಗಿ ವಿವರಿಸುವ ಯೋಗವಿಜಯ ಜನಸಾಮಾನ್ಯರ ಧರ್ಮ ತಿಳಿವಳಿಕೆ-ಯನ್ನು ಹೆಚ್ಚಿಸುವಂತೆ ಇದೆಯಾದರೂ ಅರ್ಕಕೀರ್ತಿವಿಜಯ ದೀಕ್ಷೆಗೆ ಬದ್ಧನಾಗುವ ಭರತ ಮಗ ಅರ್ಕಕೀರ್ತಿಗೆ ಯುವರಾಜ ಪಟ್ಟವನ್ನು ಕಟ್ಟಿದ್ದು ಸಹಜವೇ. ಆದರೆ ಚಕ್ರೇಶನ ಕೈವಲ್ಯದ ತರುವಾಯದಲ್ಲಿ ಆತನ ಮಗನಾದ ಅರ್ಕಕೀರ್ತಿಯ ಪ್ರಸ್ತಾಪದ ವಿವರಗಳು, ಕುಟುಂಬದ ಸದಸ್ಯರೆಲ್ಲರೂ ದಿನೇ ದಿನೇ ದೀಕ್ಷೆ ಪಡೆದದ್ದನ್ನು ಕಂಡು ಕೇಳಿ ಕಂಕಟಪಡುವುದು. ಇತ್ಯಾದಿ ವಿಚಾರಗಳನ್ನೊಳಗೊಂಡ ಅರ್ಕಕೀರ್ತಿ ವಿಜಯವನ್ನು ವಿಸ್ತಾರವಾಗಿ ಹೇಳಿದ್ದಾನೆ.

**ಮೋಕ್ಷವಿಜಯ:** ಭರತನ ಮೋಕ್ಷವನ್ನು ಕುರಿತದ್ದಾಗಿದೆ. ಈ ಸಂದರ್ಭವನ್ನು ರತ್ನಾಕರವರ್ಣಿ ಧಾರ್ಮಿಕ ವ್ಯಕ್ತಿಗಳು ಮತ್ತೆ ಮತ್ತೆ ಮನನ ಮಾಡಬೇಕಾದ ರೀತಿಯಲ್ಲಿ ಹೃದಯಂಗಮವಾಗಿ ನಿರೂಪಿಸುತ್ತಾನೆ. ಭರತನು ತನ್ನ ಕೆನ್ನೆಯಲ್ಲಿ ಬಿಳಿ ಕೂದಲನ್ನು ಕಂಡು ನಿರ್ವೇಗಪರನಾಗಿಬಿಡುತ್ತಾನೆ. ಇದು ಹೊರನೋಟಕ್ಕೆ ಅಚ್ಚರಿಯುಂಟು ಮಾಡಿದರೂ ಭರತನಂಥ ಆತ್ಮಜ್ಞಾನಿಗೆ ಅತ್ಯಂತ ಸಹಜ ಪ್ರಕ್ರಿಯೆಯಾಗಿದೆ. ಅದನ್ನು ಸಹಜ ಎಂದು ಓದುಗರು ತಿಳಿದುಕೊಳ್ಳುವ ರೀತಿಯಲ್ಲಿ ರತ್ನಾಕರವರ್ಣಿ ಭರತನ ವ್ಯಕ್ತಿತ್ವವನ್ನು ಉದ್ದಕ್ಕೂ ಹಾಗೇ ಚಿತ್ರಿಸಿದ್ದಾನೆ. ಇವನ ತಾಯಿ, ಮಕ್ಕಳೂ, ಹೆಂಡತಿಯರೂ ಸನ್ಯಾಸ ಸ್ವೀಕರಿಸುತ್ತಾರೆ.

ಭೋಗದಲ್ಲಿದ್ದುಕೊಂಡೆ ಮೋಕ್ಷ ಸಾಧಿಸಿದ್ದು 'ಭರತೇಶವೈಭವ'ದ ರತ್ನಾಕರವರ್ಣಿಯ ಉದ್ದೇಶವಾಗಿದೆ.

'ಭರತೇಶವೈಭವ'ದಲ್ಲಿ ಭರತನೇ ನಾಯಕ. ಉಳಿದ ಪಾತ್ರಗಳಲ್ಲಿ ಬಾಹುಬಲಿ, ರಾಣಿವರ್ಗ, ಯಶಸ್ವತೀದೇವಿ. ಪಂಡಿತೆ ಮೊದಲಾದವರು ಹೊಂದಿಕೊಂಡು ಬರುತ್ತಾರೆ.

'ಭರತೇಶವೈಭವ'ವು ಜಾನಪದ ಸಾಂಗತ್ಯ ಮತ್ತು ಅಚ್ಚಗನ್ನಡ ದೇಸಿ ಅವನ ಪ್ರತಿಭಟನೆಯ ಪುರುಷರಿಂದ ಹೊಳೆ ಹೊಳೆಯುವ ಹೊನ್ನಾಗಿದೆ. ಅವನ ಬರವಣಿಗೆಯಲ್ಲಿ ಸರಸ್ವತಿಯ ಪ್ರಸನ್ನತೆಯಿದೆ, ನಿರ್ಮಲತೆ ಇದೆ. ಭರತೇಶವೈಭವವು ಭರತೇಶನ ಆತ್ಮವೈಭವವಾಗಿರುವಂತೆ ರತ್ನಾಕರನ ಕಾವ್ಯ ವೈಭವವಾಗಿರುತ್ತದೆ. ಭಾಮಿನಿ ಷಟ್ಪದಿಗೆ ಕುಮಾರವ್ಯಾಸ ಹೇಗೋ, ರಗಳೆಗೆ ಹರಿಹರನು ಹೇಗೋ, ಸಾಂಗತ್ಯಕ್ಕೆ ರತ್ನಾಕರವರ್ಣಿಯೂ ಹಾಗೇ. ಯೋಗಿ-ಭೋಗಿ ಸಮನ್ವಯತೆಯನ್ನು ಸಾಧಿಸಿದ್ದಾನೆ.

# ಅಧ್ಯಾಯ – ೪

# ಪಂಪ ಮತ್ತು ರತ್ನಾಕರವರ್ಣಿಯ ಕಥಾಪ್ರಸಂಗಗಳ ತೌಲನಿಕ ಅಧ್ಯಯನ

ಆದಿಪುರಾಣ ದೊಡ್ಡ ಕೃತಿ– ಪಂಪ ಮೂರು ತಿಂಗಳ ಅಲ್ಪಾವದಿಯಲ್ಲೇ ಅತ್ಯದ್ಭುತವಾಗಿ ಬರೆದಿದ್ದಾನೆ. ಇದೊಂದು ಪುರಾಣ ಗ್ರಂಥ. ಮತ್ತು ಮಹತ್ವಪೂರ್ಣ–ವಾದ ಗ್ರಂಥವಾಗಿದೆ. ಕಥಾವಸ್ತು, ಕಥನಕ್ರಮ, ಭಾವ ಸಂಪತ್ತಿ, ಮತೀಯ ತತ್ತ್ವಬೋಧೆ ಈ ಎಲ್ಲದರಲ್ಲಿಯೂ 'ಆದಿಪುರಾಣ'ವು ಸಂಸ್ಕೃತದಲ್ಲಿ 'ಜಿನಸೇನಾಚಾರ್ಯ'ರು ಬರೆದಿರುವ 'ಪೂರ್ವಪುರಾಣ'ಕ್ಕೆ ಋಣಿಯಾಗಿದೆ. ಇಷ್ಟು ಪರತಂತ್ರವಾದರೂ ಗ್ರಂಥ ಕೌಶಲ್ಯದಿಂದ ಅದು ಸ್ವತಂತ್ರ ಕಳೆಯನ್ನು ಪಡೆದಿದೆ. 'ಪೂರ್ವ ಪುರಾಣ'ದಲ್ಲಿ ಕಾವ್ಯಕ್ಕಿಂತ ಪುರಾಣ ಹೆಚ್ಚಾಗಿದೆ. "ಆದಿಪುರಾಣ"ದಲ್ಲಿ ಪುರಾಣಕ್ಕಿಂತ ಕಾವ್ಯ ದೃಷ್ಟಿ ಹೆಚ್ಚಾಗಿ ಫಲಿಸಿದೆ. ಎರಡೂ ಜೈನ ಪುರಾಣಗಳು ಎರಡರಲ್ಲಿಯೂ ಕಾವ್ಯ ಸತ್ವವಿದೆ. ಒಂದು ಸರಳವಾದ ಪದ್ಯಕಾವ್ಯ. ಇನ್ನೊಂದು ಪ್ರೌಢವಾದ 'ಚಂಪೂಕಾವ್ಯ' ಒಂದರಲ್ಲಿ ಅತಿ ವಿಸ್ತಾರವಿದ್ದರೆ ಇನ್ನೊಂದರಲ್ಲಿ ಬಹುಮಟ್ಟಿಗೆ ಸಂಗ್ರಹ ದೃಷ್ಟಿಯಿದೆ. ಪಂಪನಲ್ಲಿ ಧರ್ಮ ಮತ್ತು ಕಾವ್ಯ ಧರ್ಮಗಳೆರಡೂ ಮೇಳೈಸಿಕೊಂಡಿವೆ. ಆದಿಪುರಾಣ ಧಾರ್ಮಿಕ ಕಾವ್ಯವಾದ್ದರಿಂದ ಧಾರ್ಮಿಕ ಅಂಶಗಳು ಅನಿವಾರ್ಯವಾಗಿದೆ. ಭವಾವಳಿಗಳ ಕಥೆಯೂ ಜೊತೆಗೂಡಿದೆ.

ಆದಿಪುರಾಣ ಜೈನಧಾರ್ಮಿಕ ಕಥೆಯಾದ್ದರಿಂದ ಭೋಗದಿಂದ ತ್ಯಾಗಕ್ಕೆ ತೆರಳಿ ಕೊನೆಗೆ ವೈರಾಗ್ಯ ಪರಿಣತರಾಗಿ ಮುಕ್ತಿಯನ್ನು ಕೇವಲ ಜ್ಞಾನವನ್ನು ಸಾಧಿಸುವ ಕಥೆಯಾಗಿದೆ. ಆದಿಪುರಾಣವು ಮುಂದಿನ ಜೈನ ಪುರಾಣಕಾರರಿಗೆಲ್ಲ ಮಾದರಿಯಾದ ಮಾರ್ಗದರ್ಶನ ಗ್ರಂಥವಾಗಿ ಪರಿಣಮಿಸಿದೆ. ರಚನೆಯ ಸಂವಿಧಾನ, ಕಾವ್ಯ ಪದ್ಧತಿ, ಭಾಷೆ, ಶೈಲಿಗಳು, ಇದಕ್ಕಿಂತ ಮಿಗಿಲಾಗಿ ರಸಭಾವಗಳ ಲಹರಿ ಇವುಗಳಲ್ಲೆಲ್ಲಾ ಅವರು ಬಲುಮಟ್ಟಿಗೆ ಪಂಪನನ್ನು ಅನುಸರಿಸಿದ್ದಾರೆ, ಅನುಕರಿಸಿದ್ದಾರೆ. ಉದಾಹರಣೆಗೆ 'ಚಾವುಂಡರಾಯ' ರತ್ನಾಕರವರ್ಣಿಯ 'ಭರತೇಶವೈಭವ', 'ಚಂದ್ರಪ್ರಭಪುರಾಣ' ೧ನೆಯ·ಗುಣವರ್ಮನ 'ಹರಿವಂಶ'.

ಆದಿಪುರಾಣ ಕೃತಿಯು ಮೂಲತಃ ಪ್ರತಿಯೊಬ್ಬರೂ ಸಹ ಓದಲು ಆಸಕ್ತ ಹುಟ್ಟಿಸುವಂಥದ್ದು. ಜೈನಧರ್ಮವನ್ನು ಬೆಳಗಿದುದು ಅದರ ಅಪೂರ್ವ ಸಾಧನೆ–ಯಾಗಿದೆ. ಈ ನಿಟ್ಟಿನಲ್ಲಿ ಕೆಲಸ ಮಾಡಿದವರಲ್ಲಿ ಪ್ರಾಚೀನ ಕನ್ನಡ ಸಾಹಿತ್ಯದ ಆದಿಕವಿ ಪಂಪನ 'ಆದಿಪುರಾಣ' ಹಾಗೂ ಮಧ್ಯಕಾಲೀನ ಕನ್ನಡ ಸಾಹಿತ್ಯದ ಕವಿ 'ರತ್ನಾಕರವರ್ಣಿಯ' 'ಭರತೇಶ ವೈಭವ' ಕೃತಿಗಳು ಗಮನಾರ್ಹವಾದವು.

ಸಂಸ್ಕೃತದ ಜಿನಸೇನಾಚಾರ್ಯರಿಂದ ರಚಿತವಾದ ಪೂರ್ವಪುರಾಣದ ಕಥೆಯೇ ಇದ್ದರೂ, ಅದರಲ್ಲೂ ಭರತ-ಬಾಹುಬಲಿ ಪ್ರಸಂಗವೇ ಇದ್ದರೂ, ಪಂಪನು ಅದನ್ನು ನೋಡಿರುವ ರೀತಿಯೇ ಬೇರೆಯಾಗಿದೆ. ಕಾಲಮಾನದ ಮತ್ತು ಸಂಸ್ಕಾರದ ದೃಷ್ಟಿಯಿಂದ ಪಂಪ ಜಿನಸೇನರಿಗಿಂತ ಕೊಂಚ ಬೇರೆಯಾಗಿಯೇ ನಿಲ್ಲುತ್ತಾನೆ. ಜಿನಸೇನರು ಜೈನಧಾರ್ಮಿಕ ಚೌಕಟ್ಟಿನಲ್ಲೇ ಭರತ-ಬಾಹುಬಲಿಯರನ್ನು ಚಿತ್ರಿಸುತ್ತಾರೆ ವಿನಾ ಪಂಪನಂತೆ ಮಾನವೀಯ ನೆಲೆಯಲ್ಲಿ ಅಲ್ಲ. ಕಾರಣ ಜಿನಸೇನರಿಗೆ ಜೈನಧರ್ಮವೇ ಶ್ರೇಷ್ಠ. ಬೇರೆ ಧರ್ಮದ ಚಿಂತೆ ಅವರಿಗಿಲ್ಲ. ಪಂಪನ ಕಾವ್ಯಕ್ರಿಯೆ, ಕಾವ್ಯಧರ್ಮ ಮತ್ತು ಧರ್ಮಗಳ ಸಮನ್ವಯ ಆಗಿದ್ದರಿಂದ ಮನುಷ್ಯ ಸಂಬಂಧಗಳಿಗೆ ಆ ಮನುಷ್ಯ ಸಂಬಂಧಗಳ ಅಂತರಂಗದ ತುಡಿತ ಬೇಗುದಿಗಳಿಗೆ ಪಂಪ ಸಹಜವಾಗಿಯೇ ಗಮನ ಹರಿಸಿದ್ದಾನೆ. ಪಂಪನು ಚಿತ್ರಿಸಿರುವ ಈ ಪಾತ್ರಗಳು ಕೇವಲ ಧರ್ಮಚಿಂತನೆಯ ಪ್ರತೀಕಗಳಾಗದೇ ಮಾನವೀಯತೆಯ ಪ್ರತಿಮೆಗಳಾಗುತ್ತವೆ. ಜಿನಸೇನ-ಪಂಪರಿಬ್ಬರೂ ವಸ್ತುವನ್ನು ಪುರಾಣದ ನೆಲೆಯಲ್ಲೇ ವಿರಮಿಸುತಾ ಅಂದರೆ ಅವರಲ್ಲಿ ಪುರಾಣಪ್ರಜ್ಞೆ ಪ್ರಧಾನವಾಗಿ ಕೆಲಸ ಮಾಡಿದೆ. ಕಾರಣ ಅವರಿಟ್ಟ ಪ್ರತಿ ಹೆಜ್ಜೆಯಲ್ಲಿ ಧರ್ಮ ಪರಿಭಾವನೆಯ ರೇಖೆ ತಪ್ಪುವುದೇ ಇಲ್ಲ; ಡೊಂಕಾಗುವುದಿಲ್ಲ.

ಜಿನಸೇನ ಮತ್ತು ಪಂಪರ ದೃಷ್ಟಿಯಲ್ಲಿ ಭರತನ ಚರಿತ್ರೆ ಭಾಗಶಃ ಮಾತ್ರ, ಪೂರ್ಣರೂಪದಲ್ಲಿ ಇಲ್ಲ. ಭರತ ಪ್ರಥಮ ತೀರ್ಥಂಕರನ ನೂರು ಮಕ್ಕಳಲ್ಲಿ ಒಬ್ಬನಾಗಿ, ಹೆಚ್ಚೆಂದರೆ ಒಬ್ಬ ಚಕ್ರವರ್ತಿಯಾಗಿ, ಇನ್ನೂ ಹೆಚ್ಚೆಂದರೆ ಶಲಾಕಾ ಪುರುಷರಲ್ಲಿ ಒಬ್ಬನಾಗಿ, ಚರಮ ದೇಹಿ ತದ್ಭವ ಮೋಕ್ಷಗಾಮಿಯಾಗಷ್ಟೇ ಕಾಣಿಸಿಕೊಂಡಿದ್ದಾನೆ. ಅವನಿಗಿಂತ ಹೆಚ್ಚು ಪರಿಣಾಮಕಾರಿಯಾಗಿ ಭರತನ ತಮ್ಮ ಬಾಹುಬಲಿಯೂ ಕಾಣಿಸಿಕೊಂಡಿದ್ದಾನೆ.

ಪೂರ್ವಪುರಾಣದಲ್ಲಿ ಭರತ-ಬಾಹುಬಲಿಯರ ವೃತ್ತಾಂತಗಳು ಪ್ರತ್ಯೇಕಗೊಂಡಂತೆ "ಪರ್ವಗಳ ವಿಶಾಲ ಭೂಮಿಕೆಯಲ್ಲಿ ಹರಡಿವೆ. (ಪೂರ್ವ ಪು. ೨೬-೩೬ನೇ ಪರ್ವ) ಈ ವಿವರಗಳನ್ನೆಲ್ಲ ಪಂಪ ನಾಲ್ಕು ಆಶ್ವಾಸಗಳಲ್ಲಿ ಅಡಕ ಮಾಡಿದ್ದಾನೆ. ಪಂಪನು ಭರತನ ಪಾತ್ರವನ್ನು ಹಲವು ದೃಷ್ಟಿಕೋನಗಳಿಂದ ವೈಶಿಷ್ಟ್ಯವೂ, ವರ್ಣಮಯವೂ ಆಗುವಂತೆ ಚಿತ್ರಿಸಿದ್ದಾನೆ. ಆದರೆ ಬಾಹುಬಲಿಯ ಪಾತ್ರದಷ್ಟು ಅತ್ಯುನ್ನತ ಮಟ್ಟಕ್ಕೆ ಏರಿಸಿಲ್ಲ. ಭರತನನ್ನು ಮನುಕುಲತಿಲಕನೆಂದೂ ಮೋಕ್ಷಲಕ್ಷ್ಮೀವಲ್ಲಭನೆಂದೂ ಕರೆದಿದ್ದಾನೆ. ಭರತನನ್ನು ಆದಿನಾಥನ ಮಟ್ಟಕ್ಕೆ ಏರಿಸಿಲ್ಲ. ಬಾಹುಬಲಿಯನ್ನು ಆದಿನಾಥನಿಗೆ ಹೋಲಿಸಿದ್ದಾನೆ. ಇವನ ದೃಷ್ಟಿಯಲ್ಲಿ ಬಾಹುಬಲಿ ಭಗವಂತನಾದ ಮಹಾಪುರುಷ. ಆತನು ರೂಪದಲ್ಲಿ ಮನ್ಮಥ, ಭರತನಂತಹ

ಚಕ್ರವರ್ತಿಯನ್ನು ಸೋಲಿಸಿದಂತಹ ವೀರ. ತಾನು ಸಂಪೂರ್ಣವಾಗಿ ಗೆದ್ದ ಸಮಸ್ತ ಭೂಮಿಯನ್ನು ಸೋತವನಿಗೆ ಹಿಂದಕ್ಕೆ ಕೊಟ್ಟ ಮಹಾತ್ಯಾಗಿ. ತಾನು ದಾನ ಕೊಟ್ಟ ಭೂಮಿಕೆಯಲ್ಲಿ ತನ್ನ ಕಾಲಿಡಲು ಬೇಕಾದಷ್ಟು ಸ್ಥಳ ತೆಗೆದುಕೊಳ್ಳಲು ಕೂಡಾ ಸಂಕೋಚಪಟ್ಟುಕೊಂಡು ಅಭಿಮಾನಿ ಕಟ್ಟಕಡೆಗೆ ಆ ಅಭಿಮಾನವನ್ನೂ ಜಯಿಸಿಕರ್ಮ-ಗಳನ್ನು ಧ್ವಂಸಮಾಡಿ ಕೇವಲ ಜ್ಞಾನ ಪಡೆದು ಮೊದಲ ತೀರ್ಥಂಕರನಿಗಿಂತ ಮೊದಲು ಮುಕ್ತಿಗೆ ಸಂದ ಮಹಾತ್ಮನನ್ನಾಗಿ ಚಿತ್ರಿಸಿದ್ದಾನೆ.

ಇನ್ನೂ 'ರತ್ನಾಕರವರ್ಣಿ'ಯ 'ಭರತೇಶವೈಭವ' ಕೃತಿಯು ಜೈನ ದಿಗಂಬರ ಸಂಪ್ರದಾಯದ ಪೂರ್ವ ಪುರಾಣವನ್ನು ಕನ್ನಡ ಸಂಸ್ಕೃತಿಯ ಪಂಪನ ಆದಿಪುರಾಣ-ವೆರಡನ್ನೂ ಅನುಸರಿಸಿದ್ದಾನೆ. ಆದರೆ ಈ ಕೃತಿಯನ್ನು ರತ್ನಾಕರವರ್ಣಿಯು ನೋಡಿರುವ ದೃಷ್ಟಿಯೇ ಬೇರೆಯಾಗಿದೆ. ರತ್ನಾಕರವರ್ಣಿಯ ವಸ್ತು ಆದಿಪುರಾಣದ ಭಾಗ ಮಾತ್ರ. ಆದಿತೀರ್ಥಂಕರರ ಮಕ್ಕಳಾದ ಭರತ ಬಾಹುಬಲಿಯರ ಸುತ್ತ ಹೆಣೆದ ಕಥೆಯದು. ಭರತ ಚಕ್ರವರ್ತಿಯನ್ನು ಕೇಂದ್ರ ಕಥಾನಾಯಕನನ್ನಾಗಿಸಿದ್ದು ಇವನ ಹೆಗ್ಗಳಿಕೆ. ಇವನ ಕಾವ್ಯದ ಉದ್ದೇಶವೇ ಬೇರೆ. ಇದಕ್ಕೆ ಮುಖ್ಯ ಕಾರಣ ಅವನ ಪರಿಸರ. ರತ್ನಾಕರನ ಕಾಲದಲ್ಲಿ ಜೈನಧರ್ಮ ಇಳಿಮುಖದ ಹಾದಿಯಲ್ಲಿತ್ತು. ರಾಜಾಶ್ರಯವಿಲ್ಲದೇ ಜನಸಾಮಾನ್ಯರೇ ಜೈನಧರ್ಮವನ್ನೂ ಅರಿತುಕೊಳ್ಳಬೇಕಾದ ಅನಿವಾರ್ಯತೆ ಇತ್ತು. ದ್ವೈತ, ವಿಶಿಷ್ಟಾದ್ವೈತ, ಸಿದ್ಧಾಂತಗಳ ಹಾವಳಿ, ವೀರಶೈವ ಧರ್ಮದ ಪ್ರಭಾವ, ಎಲ್ಲ ಧರ್ಮದವರನ್ನು ಸಮಾನವಾಗಿ ಕಾಣಬೇಕಾದ, ಪೋಷಿಸಬೇಕಾದ ರಾಜಕೀಯ ಬಿಕ್ಕಟ್ಟನ್ನು ವಿಜಯನಗರದ ಅರಸರು ಎದುರಿಸಬೇಕಾದ ಸ್ಥಿತಿ. ಇಷ್ಟು ಸಾಲದೆಂಬಂತೆ ಮುಸ್ಲಿಂರ ಆಕ್ರಮಣ - ಹೀಗೆ ಒಟ್ಟಾರೆಯಾಗಿ ರಾಜಕೀಯ, ಸಾಮಾಜಿಕ ಪರಿಸರವೇ ಜೈನಧರ್ಮವನ್ನು ಉದಾಸೀನ ಮಾಡಿದ್ದ ಸಂದರ್ಭವದು. ಹೀಗಿದ್ದೂ ಕರಾವಳಿಯ ಸಾಮಂತರಾಜರು ಮಾತ್ರ ಜೈನಧರ್ಮವನ್ನು ಪ್ರೀತಿಯಿಂದ ಪೋಷಿಸಿದ್ದರು. ವಿಜಯನಗರದ ಮಾಂಡಲೀಕರನೇಕರು ಜೈನಧರ್ಮ ನಶಿಸಿ ಹೋಗದಂತೆ ರಕ್ಷಿಸಿದ್ದರು. ಸ್ವತಃ ಜೈನಮತ ಅನುಯಾಯಿಗಳು ಆಗಿದ್ದರು ಇಂತಹ ಹೊತ್ತಿನಲ್ಲೆ ರತ್ನಾಕರ 'ಭರತೇಶವೈಭವ' ಕೃತಿಯನ್ನು ರಚಿಸಿದ್ದು ಭರತನ ಕಥೆ ಬೇರೆ ರೂಪು ಪಡೆದುಕೊಳ್ಳುವುದಕ್ಕೆ ಈ ಹಿನ್ನೆಲೆಯೇ ಕಾರಣವಾಗಿದೆ.

ರತ್ನಾಕರ ಭಿನ್ನವಾಗುವುದು ವಸ್ತುವಿನ ವಿಸ್ತಾರದಿಂದ. ಅವನ ಇಡೀ ಕಾವ್ಯದ ವಸ್ತು ವಿಸ್ತಾರದ ಕೇಂದ್ರ ಬಿಂದು ಭರತ. ಈತನೇ ಈ ಸಮಗ್ರ ಕಾವ್ಯದ ನಾಯಕ. ಭರತನನ್ನು ರತ್ನಾಕರ ಕೇವಲ ಚರಮದೇಹಿಯೆಂದೋ, ತದ್ಭವಮೋಕ್ಷಗಾಮಿಯಾಗಷ್ಟೇ ನಿಲ್ಲಿಸುವುದಿಲ್ಲ. ಅದರಾಚೆಗೂ ಅವನನ್ನು ಮನುಷ್ಯನಾಗಿ ಕಾಣಿಸುವುದಕ್ಕೆ ಪ್ರಯತ್ನಿಸು-

ತ್ತಾನೆ. ಜೈನಧರ್ಮದಲ್ಲಿ ಕಠಿಣ ತಪಸ್ಸು ಮತ್ತು ವೈರಾಗ್ಯವೇ ಪರಮ ಸ್ಥಿತಿ. ಆದರೆ ಆ ವೈರಾಗ್ಯ ಸಿದ್ಧ ನೆಲೆಯಲ್ಲಿ ರೂಪಿತವಾಗುತ್ತದೆ ಎಂದು ತೀರ್ಥಂಕರ ಚರಿತೆಗಳು ಹೇಳುವುದು ಸಾಮಾನ್ಯರಿಗೆ ಅರ್ಥವಾಗದ ವಿಚಾರ ಮಾತ್ರವಲ್ಲ ತೀರ್ಥಂಕರ ಸ್ಥಿತಿಯನ್ನು ಎಲ್ಲರೂ ಹೊಂದುವುದು ಅಸಾಧ್ಯವೇ. ಆದ್ದರಿಂದ ತೀರ್ಥಂಕರನ ಸಾಮಿಪ್ಯ ಸುಖವುಂಡು, ತೀರ್ಥಂಕರನಾಗದಿದ್ದರೂ, ಆ ಎಲ್ಲಾ ಲಕ್ಷಣಗಳಿಗೆ ಭರತ ಅರ್ಹನಾಗಬಲ್ಲ ಎಂಬುದರ ಕಥಾ ಎಳೆಯ ಬೆನ್ನುಹತ್ತಿ ರತ್ನಾಕರ ಸ್ವತಂತ್ರ ನಾಯಕನನ್ನಾಗಿಸುತ್ತಾನೆ. ರತ್ನಾಕರ ತನ್ನ ಕಾವ್ಯವನ್ನು ಪುರಾಣವಾಗಿಸದೆ ವೈಭವ-ವಾಗಿಸುತ್ತಾನೆ. ವೈಭವವನ್ನು ಅನುಭವಿಸುತ್ತಲೂ ಮೋಕ್ಷ ಚಿಂತನೆಯಲ್ಲೂ ತೊಡಗಲು ಸಾಧ್ಯ ಎಂಬುದನ್ನು ಭರತನ ಮೂಲಕ ರತ್ನಾಕರ ಸಾಬೀತುಪಡಿಸುತ್ತಾನೆ. ರತ್ನಾಕರನಿಗೆ ರಾಜನಲ್ಲೇ ಯೋಗ ಮತ್ತು ಭೋಗವನ್ನು ತೋರಿಸಬೇಕಿತ್ತು; ಸಂಪತ್ತಿನಲ್ಲಿದ್ದವರೇ ಸಂಪತ್ತನ್ನು ಕ್ಷಣಮಾತ್ರದಲ್ಲಿ ನಿರಾಕರಿಸುವುದು, ನಿರಸನ ಹೊಂದುವುದನ್ನು ಸಾಮಾನ್ಯರಿಗೆ ತಿಳಿಸಿ ಹೇಳಬೇಕಿತ್ತು. ಕಾರಣ ಆ ವೇಳೆಗಾಗಲೇ ವೈಷ್ಣವ ಭಾಗವತ ಧರ್ಮಗಳು ತಮ್ಮ ಧರ್ಮ ಪ್ರಸಾರ ಮತ್ತು ಸಮರ್ಥನೆಗೆ ಹದಿನಾರು ಸಾವಿರ ಗೋಪಿಕಾ ಸ್ತ್ರೀಯರೊಡನಿದ್ದ ಕೃಷ್ಣಕಥೆಯನ್ನು ಮುಂದುಮಾಡಿ ಭಕ್ತ-ಭಗವಂತನ ಅದ್ವೈತ ಸ್ಥಿತಿಯನ್ನು ಪ್ರತಿಬಿಂಬಿಸಿದ್ದವು. ಇವೆಲ್ಲವನ್ನೂ ಒಳಗೊಂಡು ಅವೆಲ್ಲವನ್ನೂ ಮೀರಿಸುವಂತೆ ಹೇಳುವ ಅನಿವಾರ್ಯತೆ ರತ್ನಾಕರನಿಗೆ ಇತ್ತು. ಆದ್ದರಿಂದ ಈಗಾಗಲೇ ಪ್ರಚಲಿತವಾಗಿದ್ದ ಜನಪ್ರಿಯನೂ ಆಗಿದ್ದ ಭರತನ ಕಥೆಯನ್ನೇ ಸಾಮಾನ್ಯೀಕರಿಸಿ, ಸಾಧಾರಣೀಕರಿಸಿ, ಧಾರ್ಮಿಕ ವಾಸನೆಯನ್ನು ಕಡಿಮೆಗೊಳಿಸಿ ನಿರೂಪಿಸಿದ್ದಾನೆ.

ಉದಾಹರಣೆಗೆ: ಕಥೆಯ ಆರಂಭದಲ್ಲಿಯೇ ಕವಿ "ಗಣನೆಯಿಲ್ಲದ ರಾಜ್ಯ ಸುಖದೊಳೋಲಾಡಿ ಧಾರಿಗೆ ಮೆಚ್ಚಿ ಜಿನಯೋಗಿಯಾಗಿ, ಕ್ಷಣಕೆ ಕರ್ಮವ ಸುಟ್ಟು ಜಿನನಾದ ಭೂ ಭುಜಾಗ್ರಣಿಯ ವೈಭವ ಲಾಲಿಸಿರೋ" ಎಂದೇ ಕರೆಕೊಡುತ್ತಾರೆ.

ಭರತನ ಪಾತ್ರದ ಮೂಲಕ ಯೋಗ-ಭೋಗ ಸಮನ್ವಯತೆಯನ್ನು ಸಾಧಿಸಿದ ಕವಿ ಬಾಹುಬಲಿಗೆ ಸಲ್ಲಬೇಕಾದ ಸ್ಥಾನಮಾನವನ್ನು ಕೊಟ್ಟಿದ್ದರೂ, ಸಹ ಕೆಲವೆಡೆ ದೋಷಗಳನ್ನು ತಿಳಿಸಿದ್ದಾನೆ. ಆದರೆ ಬಾಹುಬಲಿಯನ್ನು ಭರತನಷ್ಟು ಮುಗಿಲೆತ್ತರಕ್ಕೆ ಏರಿಸಿಲ್ಲ.

ಸಾಂಗತ್ಯದ ಸೀಮಾಪುರುಷನೆಂದು ವಿಖ್ಯಾತನಾಗಿರುವ ರತ್ನಾಕರವರ್ಣಿ ಭರತೇಶ ವೈಭವವನ್ನು ಸಾಂಗತ್ಯದಲ್ಲಿ ರಚಿಸಿ ಕಾವ್ಯವಸ್ತು ಮತ್ತು ದರ್ಶನದ ದೃಷ್ಟಿಯಿಂದ ಶ್ರೇಷ್ಠ ಕವಿ ಎಂಬ ಅಗ್ಗಳಿಕೆಗೆ ಪಾತ್ರನಾಗಿದ್ದಾನೆ. "ರತ್ನಾಕರನ

ಸಿದ್ಧಹಸ್ತದಿಂದ ನಿರ್ಮಾಣವಾದ ಶ್ರೇಷ್ಠ ಕೃತಿ. ಸಂಸ್ಕೃತದಲ್ಲಿ ಜಿನಸೇನನ ಪೂರ್ವಪುರಾಣದಲ್ಲಿ, ಅನಂತರ ಪಂಪನ ಆದಿಪುರಾಣವೇ ಮೊದಲಾಗಿ ಕನ್ನಡ ಗ್ರಂಥಗಳಲ್ಲಿ ಭರತ ಚಕ್ರವರ್ತಿ ಮತ್ತು ಬಾಹುಬಲಿಗಳ ಚರಿತೆ ಬಂದಿದೆ. ಆದರೆ ಭರತನನ್ನೇ ಕಥಾನಾಯಕನನ್ನಾಗಿ ಮಾಡಿಕೊಂಡು ವಿಸ್ತಾರವಾಗಿ ಪ್ರತಿಪಾದಿಸಿದ ಕೀರ್ತಿ ರತ್ನಾಕರವರ್ಣಿಗೆ ಸೇರಿದ್ದು. "ಭರತೇಶ ರಾಜಯೋಗಿ, ಜಿನಯೋಗಿ, ತ್ಯಾಗಿ-ಭೋಗಿ, ರಸಿಕ-ವಿರಕ್ತ" ಭರತೇಶ ವೈಭವ ಭರತನ ದಿನಚರಿಯಂತೆ ಇದ್ದು, ಅವನ ಬದುಕಿನ ವಿಸ್ತಾರ, ವೈವಿಧ್ಯ ವಿಲಾಸಗಳ ವೈಭವಗಳ ಮಹೋನ್ನತಿಯನ್ನು ಕಲಾತ್ಮಕವಾಗಿ ಕನ್ನಡಿಸುತ್ತದೆ. ಭರತೇಶ್ವರ ಆದಿ ತೀರ್ಥಂಕರನ ಹಿರಿಯ ಮಗ, ಪ್ರಥಮ ಚಕ್ರವರ್ತಿ. ಈತನ ಬಗ್ಗೆ ಭಾರತೀಯ ಭಾಷೆಗಳಲ್ಲಿ ವಿಪುಲವಾದ ಸಾಮಗ್ರಿಯಿದೆ. ರತ್ನಾಕರವರ್ಣಿ ಭರತೇಶನ ಭೋಗದ ಬಹಿರಂಗದ ಬದುಕನ್ನು ಮಾತ್ರ ಚಿತ್ರಿಸಿಲ್ಲ. ಅವನ ಅಂತರಂಗದ ಜೀವನವನ್ನೂ ಬಣ್ಣ ಕಟ್ಟಿ ಬಣ್ಣಿಸಿದ್ದಾನೆ. ಭರತೇಶ ಬಳಸಿ ಬ್ರಹ್ಮಚಾರಿ, ಉಂಡೂ ಉಪವಾಸಿ, ಆಹಾರವುಂಟು ನೀಹಾರವಿಲ್ಲ. ಈತನನ್ನು ಆರಿಸಿಕೊಂಡು ಸ್ವತಂತ್ರವಾಗಿ ರಚಿಸಿದ ಈ ಗಾತ್ರದ ಕಾವ್ಯ ಯಾವ ಭಾರತೀಯ ಭಾಷೆಗಳಲ್ಲೂ ಇಲ್ಲ.

ಭರತನನ್ನು ಕಾವ್ಯದ ನಾಯಕನನ್ನಾಗಿ ಆರಿಸಿಕೊಂಡ ರತ್ನಾಕರ ಸಂಸ್ಕೃತದ ಪೂರ್ವಪುರಾಣ ಹಾಗೂ ಕನ್ನಡದ ಆದಿಪುರಾಣಗಳಲ್ಲಿನ ಸಿದ್ಧವಸ್ತುವನ್ನು ತನಗೆ ಸೂಕ್ತವೆನ್ನಿಸಿದಂತೆ ಮಾರ್ಪಾಡಿಸಿಕೊಂಡಿದ್ದಾನೆ. ಭರತನನ್ನು ಮೇಲೆತ್ತುವ, ನಾಯಕನನ್ನಾಗಿ ಮಾಡುವ ರಭಸದಲ್ಲಿ ಅಷ್ಟೇ ಪ್ರಮುಖನಾದ ಬಾಹುಬಲಿ ಕೆಳಗಿಳಿಯುವ ಅಪಾಯವಿದೆ. ಪಂಪನಲ್ಲಿ ಬಾಹುಬಲಿ ವ್ಯಾಯೋಗ ಪ್ರಕರಣ ರಸಾತ್ಮಕವಾಗಿ ರೂಪುಗೊಂಡು ಕನ್ನಡ ಕಾವ್ಯಾಭ್ಯಾಸಿಗಳ ಮನಸ್ಸಿನ ಮೇಲೆ ಅಚ್ಚೊತ್ತಿ ನಿಂತಿದೆ. ಪಂಪನ ಆದಿಪುರಾಣದಲ್ಲಿ ಭರತ ಆನುಷಂಗಿವಾಗಿಬಿಡುತ್ತಾನೆ. ಬಾಹುಬಲಿಯ ಹೈಮಾಚಲ ವ್ಯಕ್ತಿತ್ವದ ಮುಂದೆ. ಪಂಪಾನಂತರ ಕನ್ನಡ ಸಾಹಿತ್ಯದಲ್ಲಿ ಎಲ್ಲೆಲ್ಲಿ ಈ ಬಾಹುಬಲಿ ಪ್ರಕರಣ ಚಿತ್ರಣವಿದೆಯೋ ಅಲ್ಲೆಲ್ಲ ಅದು ಪಂಪ ಪ್ರಭಾವಿತವೇ ಆಗಿದೆ. ಈ ಮಾತಿಗೆ ರತ್ನಾಕರನೊಬ್ಬನೇ ಅಪವಾದ. ಅವನಲ್ಲಿ ಭರತನ ಔನ್ನತ್ಯದೆದುರು ಬಾಹುಬಲಿ ಸ್ವಲ್ಪ ಮಂಕಾಗುತ್ತಾನೆ: ಈ ಮಾರ್ಪಾಟನ್ನು ಪಂಪ ಸಂಸ್ಕಾರ ಚಿತ್ತ ಸ್ವಾಗತಿಸುವುದು ನುಂಗಲಾರದ ತುತ್ತು. ಆದರೆ ರತ್ನಾಕರ ಕವಿಯ, ಈ ವಸ್ತು ವ್ಯತ್ಯಾಸದ ಔಚಿತ್ಯ ಸ್ವಾರಸ್ಯಗಳನ್ನು ಕಾವ್ಯಾಭ್ಯಾಸ ಮಾಡಿಯೇ ತಿಳಿಯಬೇಕು. ರತ್ನಾಕರವರ್ಣಿ ವಸ್ತುವಿನ ಚೌಕಟ್ಟನ್ನು ಆರಿಸಿಕೊಂಡರೂ ಉಳಿದಂತೆ ಪೂರ್ವ ಕವಿ ಋಣ ಕಡಿಮೆ. ಅಣ್ಣ ತಮ್ಮಂದಿರ ನಡುವೆ ಜಗಳ ಇಷ್ಟವಿಲ್ಲದ ಮನೋಧರ್ಮ ರತ್ನಾಕರನದು. ಸೆಣಸಲು ಬಂದ ಬಾಹುಬಲಿಯೊಡನೆ ಹೋರಾಡದೆ ಭರತನು

ಮಾತಿನಿಂದ ಅವನ ಮನವೊಲಿಸುತ್ತಾನೆ. ವಿರಕ್ತನಾದ ಬಾಹುಬಲಿ ದೀಕ್ಷೆ ತೆಗೆದುಕೊಳ್ಳಲು ಹೊರಟುಬಿಡುತ್ತಾನೆ. ಭರತನ ಸೋದರಪ್ರೇಮ ಇಲ್ಲಿ ಚಿತ್ರಿತವಾಗಿದೆ.

ರತ್ನಾಕರನಿಗೆ ಅರಿವಿನ ಕೊರತೆಯಿಲ್ಲ, ಶಾಸ್ತ್ರ ಅಶುದ್ಧಿಯಿಲ್ಲ, ಸ್ಥಾಯಿಯಾದ ಕಾವ್ಯಪ್ರಜ್ಞೆಯಿದೆ. ಕಾವ್ಯಗುಣ ಅಗಣಿತವಾಗಿ ಶಾಸ್ತ್ರಗುಣ ಗೌಣವಾಗಿದೆ. ತಾತ್ತ್ವಿಕ ಜಿಜ್ಞಾಸೆ ಇಲ್ಲಿ ಇಲ್ಲವೆಂದಲ್ಲ. ಬೇಕಾದಷ್ಟು ಇದೆ ಕಾವ್ಯದಲ್ಲಿ ಕರಗಿ ಅವತರಿಸಿದೆ. ವಿಚಾರದ ವಿಲಾಸದಿಂದ ಸೌಂದರ್ಯದ ಜಿಜ್ಞಾಸೆಗೆ ಜಿಗಿಯುವುದಕ್ಕೆ ಸಾಧನವಾಗಿ ನಿಂತು ಹಿಂದೆ ಸರಿದಿದೆ. ಅದು ದೈವೀಭಾವವನ್ನು ಉದ್ದೀಪಿಸುವಂತೆ ಸತ್ಯಾನುಭವಕ್ಕೂ ಒಯ್ಯುತ್ತದೆ. ಮನೋಹರವೂ ಮಂಗಳಕರವೂ ಆದ ಸೌಂದರ್ಯದ ವರ್ಣ ಪ್ರಖರತೆ, ಶಕ್ತಿ ಹಾಗೂ ಆಕರ್ಷಣೆಗೆ ರತ್ನಾಕರನ ಕಣ್ಣು ಸದಾ ಬಿಡುಗಣ್ಣಾಗಿದೆ.

ರತ್ನಾಕರನಿಗೆ ಸೌಂದರ್ಯ ಗ್ರಹಣ ಶಕ್ತಿಯಂತೆ ಚಿತ್ರಕಾರನ ವರ್ಣಶಿಲ್ಪದ ಮೋಡಿ ಮಾಟವೆಲ್ಲ ವಶವಾಗಿದೆ. ಅಷ್ಟು ಅದ್ಭುತವಾದ ಚಿತ್ರಕ ಶಕ್ತಿಯಿದೆ. ಅವಸರವಿಲ್ಲದೆ, ಅಸ್ಪಷ್ಟತೆಯಿಲ್ಲದೆ ಚೆಲುವಿನ ಚಿತ್ರಗಳನ್ನು ಬಿಡಿಸುತ್ತಾನೆ. ಈ ಚಿತ್ರಗಳಿಗೆ ರತ್ನಾಕರ ಚಿರಂತನವಾಗಿವೆ. ಮಕ್ಕಳನ್ನು ತೊಟ್ಟಿಲಲ್ಲಿಟ್ಟು ತೂಗುವ ತಾಯಂದಿರ ಚಿತ್ರ ವಿಶ್ವವಿಖ್ಯಾತ ನಿತ್ಯನೋಟ. ಆದರೆ ಭರತೇಶ ತನ್ನ ತಾಯಿಯನ್ನು ತೂಗುಮಂಚದಲ್ಲಿ ಮಲಗಿಸಿ ತೂಗುತ್ತಿದ್ದನೆಂಬ ಭಾಗ ಮಾತೃಭಕ್ತಿಗೆ ಸುವರ್ಣ ಕಳಶವಿಟ್ಟಂತಿದೆ:

> ತೂಗುಮಂಚದೊಳೊರಗಿದ ತಾಯ ಭರತೇಶ ಗೂತಿದನಂದು ತೊಟ್ಟಿಲೊಳು
> ರಾಗದೊಳಿಟ್ಟಾಕೆ ತೂಗಿದ ಸಾಲವ ತೂಗಿ ತಿದ್ದುವನೊಯೆಂಬಂತೆ॥
> ಎಲೆಯ ಘಳಿಗೆಯ ಕೆಂಬಾಯ್ದೆರೆಗೂಡುವ ತಳಿವನು ಮೈಗೆ ಪನ್ನೀರಾ
> ಚಿಲುಪಾಲನೂಡಿ ನೀರೆರೆದಾಕೆ ಸಲಹಿದ ಬಲು ಋಣವನು ತಿದ್ದುವಂತೆ
> .....ಬಳಲಿದಿರಮ್ಮಾಜಿ ಮುಪ್ಪಿನೊಳುಪವಾಸ ಸಲುವುದೆ ನಿಮಗೆಂದು ನೋವಾ॥

ಹೀಗೆ ತನ್ನ ಮುಪ್ಪಿನ ತಾಯಿಯನ್ನು ಮಗುವಿನಂತೆ ನೋಡಿ ಭಕ್ತಿಯ ತಂಗಾಳಿ ಬೀಸುತ್ತಾನೆ. ಮಾತೃಭಕ್ತಿಯ ಬೆಳುದಿಮಗಳನ್ನು ಇಲ್ಲಿ ಕಾಣುತ್ತೇವೆ. ಇಂಥ ಹೃದಯಸ್ಪರ್ಶಿ ದೃಶ್ಯಗಳು ರತ್ನಾಕರನಲ್ಲಿ ಸಾಲುಸಾಲಾಗಿ ತೇಲಿಬರುತ್ತವೆ. ರತ್ನಾಕರನ ಮೋಹಕ ಶೈಲಿ, ಮಾತುಗಾರಿಕೆ, ನಾಟಕೀಯತೆ ಮೊದಲಾದವನ್ನು ವಿಮರ್ಶಕರು ಚೆನ್ನಾಗಿ ಗುರುತಿಸಿದ್ದಾರೆ. ಅದರಂತೆ ಕವಿಯ ಪಾತ್ರಚಿತ್ರಣವನ್ನು ಮರೆಯುವಂತಿಲ್ಲ. ಪಾತ್ರ ರಚನೆಯಲ್ಲಿ ಕವಿಯ ಕೈ ಪಳಗಿದೆ.

ರತ್ನಾಕರವರ್ಣಿಯು ತನ್ನ ಕೃತಿಯ ಮೂಲಕ ಭೋಗದಲ್ಲಿದ್ದುಕೊಂಡು ವೈರಾಗ್ಯವನ್ನು ತಾಳಿ ಕೊನೆಗೆ ಮೋಕ್ಷ ಸಂಪಾದಿಸುವುದನ್ನು ನಿರೂಪಿಸುವ ಪ್ರಯತ್ನ

ಮಾಡಿದ್ದಾನೆ. ಶೃಂಗಾರದಲ್ಲಿದ್ದುಕೊಂಡು ಕರುಣಸಾರ್ದ್ರವಾಗುವ ಚಿತ್ರಣವನ್ನು ಕೊಟ್ಟಿದ್ದಾನೆ. ಹದಿನಾರನೆಯ ಮನುವಾದ ಭರತ ಕೇವಲ ಧಾರ್ಮಿಕ ವ್ಯಕ್ತಿಯಾಗಿ ಪರಿಣಮಿಸದೆ ಭಾಗವತ ಸಂಪ್ರದಾಯದ ಕೃಷ್ಣನೂ ಆಗಿ ಬಿಡುತ್ತಾನೆ. ಅದಕ್ಕೂ ಅವನಲ್ಲಿ ಕಾರಣವಿದೆ. ಸಮರ್ಥನೆಯಿದೆ, ಭರತನಿಗೆ ಸಂಬಂಧಿಸಿದಂತೆ ಪಂಚಕಲ್ಯಾಣ-ಗಳಿಗೆ ಪರ್ಯಾಯವಾಗಿ ಇಲ್ಲಿ ಭೋಗವಿಜಯ, ದಿಗ್ವಿಜಯ, ಯೋಗವಿಜಯ, ಅರ್ಕಕೀರ್ತಿವಿಜಯ, ಮೋಕ್ಷ ವಿಜಯಗಳನ್ನು ತಂದಿರುವುದನ್ನು ಗಮನಿಸಬಹುದು. ಭರತನ ಪಾತ್ರ ಸೃಷ್ಟಿಯಲ್ಲಿ ಹೊಸತನ್ನು ತಂದಿದ್ದಾನೆ. ಭರತನ ಪಾತ್ರದ ಮೂಲಕ ತನ್ನ ಕೃತಿಗೆ ಮತ್ತು ಜೈನ ಧಾರ್ಮಿಕರಿಗೆ ಒಂದು ವಿಶಿಷ್ಟ ರೀತಿಯ ತಿರುವನ್ನು ಕೊಟ್ಟಿದ್ದಾನೆ.

ಪಂಪನು ಜಿನಸೇನಾಚಾರ್ಯರ ಪೂರ್ವ ಪುರಾಣವನ್ನು, ರತ್ನಾಕರವರ್ಣಿಯು ಇವರಿಬ್ಬರನ್ನೂ ಅನುಸರಿಸಿ, ರಚಿಸಿದರೂ ಸಹ ಇಬ್ಬರೂ ತಮ್ಮ ತಮ್ಮ ಕೃತಿಗಳಲ್ಲಿ ನೋಡಿರುವಂತಹ ದೃಷ್ಟಿ ಬೇರೆ ಬೇರೆಯಾಗಿದೆ. ಇವೆರಡೂ ಕೃತಿಗಳನ್ನು ನೋಡಿದಾಗ ಕೆಲವೊಂದು ವಿಚಾರಗಳು ಸಾಮ್ಯತೆಯನ್ನು ಕೂಡಿದ್ದರೆ, ಮತ್ತೆ ಕೆಲವು ವಿಚಾರಗಳು ವೈಷಮ್ಯತೆಯಿಂದ ಕೂಡಿವೆ. ಇದನ್ನು ಕೃತಿಯ ಸಂದರ್ಭದಲ್ಲಿಯೇ ನೋಡಬಹುದು. 'ಪಂಪ' ರಚಿಸಿರುವ 'ಆದಿಪುರಾಣ' ಸಂಸ್ಕೃತದ ಜಿನಸೇನಾಚಾರ್ಯರ ಪೂರ್ವಪುರಾಣ ವನ್ನು ಆಧಾರವಾಗಿಟ್ಟುಕೊಂಡು ರಚಿತವಾಗಿರುವ ಕೃತಿ. ಇದೊಂದು ಪುನರ್‌ಸೃಷ್ಟಿ.

ಪಂಪನು ಕಾಲಮಾನದ ದೃಷ್ಟಿಯಿಂದ ಮತ್ತು ಸಂಸ್ಕಾರದ ದೃಷ್ಟಿಯಿಂದ ಜಿನಸೇನರಿಗಿಂತ ಕೊಂಚ ಬೇರೆಯೇ ನಿಲ್ಲುತ್ತಾನೆ. ಇದಕ್ಕೆ ಕಾರಣ ೧೦ ಶತಮಾನ ಜೈನ ಸಾಹಿತ್ಯಕ್ಕೆ ಸಂಬಂಧಿಸಿದಷ್ಟೆ ಸುವರ್ಣಯುಗ ಎಂಬುದು ನಿಜವಾಗಿದ್ದರೂ, ಅನ್ಯಧರ್ಮಗಳೂ ಆ ಕಾಲಕ್ಕೆ ಮೊಳಕೆಯೊಡೆಯುತ್ತಿದ್ದವು. ಕರ್ನಾಟಕ ಇತಿಹಾಸಕ್ಕೆ ಸಂಬಂದಿಸಿದಂತೆ ರಾಜಕೀಯವಾಗಿ ತೆಳುವಾಗಿ ಏರುಪೇರುಗಳು ಕಂಡೂ ಕಾಣದ ರೀತಿಯಲ್ಲಿತ್ತು. ಇಷ್ಟಕ್ಕೂ ಪಂಪನಲ್ಲಿ ವೈದಿಕ ಮತ್ತು ಜೈನ ಸಂಸ್ಕೃತಿಗಳೆರಡೂ ಮನೆ ಮಾಡಿದ್ದವು. ಮಹಾಪುರಾಣವನ್ನು ಯಥಾವತ್ತಾಗಿ ಅನುಸರಿಸದೆ ಮೂಲ ಕಥಾ ಚೌಕಟ್ಟನ್ನು ಹಾಗೆಯೇ ಉಳಿಸಿಕೊಂಡು ಕಥಾ ರಚನಾ ವಿನ್ಯಾಸದಲ್ಲಿ ಸ್ವಂತಿಕೆಯನ್ನು ಮೆರೆದಿದ್ದಾನೆ. ನೀರಸವಾಗಬಹುದಾದ ಕಥಾವಸ್ತುವಿಗೆ ಶೃಂಗಾರರಸದ ಲೇಪವನ್ನು ಹಚ್ಚಿದ್ದಾನೆ. ಹೀಗಾಗಿ 'ಆದಿಪುರಾಣ' ಜಿನಸೇನರ ಆಧ್ಯಾತ್ಮ ಚಿಂತನೆಯನ್ನು ಮೀರಿ ಆಧ್ಯಾತ್ಮವನ್ನು ಒಳಗೊಂಡಂತೆಯೂ ತುಸುಮಟ್ಟಿಗೆ ಲೌಕಿಕ ಕಾವ್ಯವಾಗಿ ಗಮನ ಸೆಳೆಯುತ್ತದೆ; ಗೆಲ್ಲುತ್ತದೆ.

ಜೈನ ಧಾರ್ಮಿಕ ಚೌಕಟ್ಟಿನಲ್ಲಿ ಹಿನ್ನೆಲೆಯಲ್ಲೇ ಬರೆದ ಪ್ರಾಚೀನ ಸಂಸ್ಕೃತ ಪುರಾಣ ಕೃತಿಯೊಂದನ್ನು ಪಂಪ ಮಾನವೀಯ ನೆಲೆಯಲ್ಲಿ ಚಿತ್ರಿಸುವ ಅಥವಾ

ನಿರ್ಮಿಸುವ ಪ್ರಕ್ರಿಯೆಯಲ್ಲಿ ಗೆದ್ದಿದ್ದಾನೆ ಎಂದು ಹೇಳಬಹುದು. ಸೃಜನಶೀಲ ಕವಿಯಾದ್ದರಿಂದ ಅವನ ಸೃಜನಶೀಲ ಪ್ರತಿಭೆಯ ಸಾಹಸ ಈ ಕೃತಿಯ ಆರು ಆಶ್ವಾಸಗಳಲ್ಲಿಯೇ ಸ್ಫುಟಗೊಂಡಿರುವುದನ್ನು ಕಾಣುತ್ತೇವೆ. ಇಲ್ಲಿ ಕಂಡುಬರುವ ವಿಶಿಷ್ಟ ಅಂಶಗಳೆಂದರೆ ಭರತನ ಅಹಂಕಾರ ನಿರಸನ ಮತ್ತು ಬಾಹುಬಲಿಯ ವ್ಯಕ್ತಿತ್ವದ ಔನ್ನತ್ಯವನ್ನು ಕಂಡರಿಸುವುದು ಪಂಪನ ಮುಖ್ಯ ಉದ್ದೇಶ. ಭರತ ಬಾಹುಬಲಿಯರ ಭವಾವಳಿ ನಿರೂಪಣೆ, ಹುಟ್ಟುಬೆಳವಣಿಗೆ, ಭರತನ ದಿಗ್ವಿಜಯ ಸಾಧನೆ, ಭರತ-ಬಾಹುಬಲಿಗಳ ಯುದ್ಧ, ಬಾಹುಬಲಿಯ ವೈರಾಗ್ಯ-ದೀಕ್ಷೆ, ಭರತನ ರಾಜ್ಯಭಾರ ಕರಮ ಮತ್ತು ಮೋಕ್ಷ ವಿಚಾರಗಳನ್ನೂ ನೋಡಬಹುದಾಗಿದೆ. ಭರತ-ಬಾಹುಬಲಿಯ ಕಥೆ ಅತ್ಯಂತ ರೋಚಕವಾದುದಾಗಿದೆ. ವೃಷಭನ ಮಕ್ಕಳಾದ ಭರತ-ಬಾಹುಬಲಿಯರು ಸಾಮಾನ್ಯರಾದವರಲ್ಲ. ಒಬ್ಬ ಪ್ರಥಮ ಚಕ್ರಿಯಾದರೆ ಮತ್ತೊಬ್ಬ ಪ್ರಥಮ ಕಾಮದೇವ. ಇವರಿಬ್ಬರ ಹುಟ್ಟು, ಬೆಳವಣಿಗೆ, ಜೀವನಶೈಲಿ, ಧೋರಣೆ, ಸಾಧನೆ ಈ ಮೊದಲಾದ ಅಂಶಗಳನ್ನು ಚಿತ್ರಿಸಿದ್ದಾನೆ. ಒಂದೆಡೆ ವೈಭವ, ಸಾಹಸ, ಅಹಂಭಾವ, ಅಭಿಮಾನಿಗಳ ಚಿತ್ರಣ ಮಿಳಿತವಾಗಿದ್ದರೆ, ಮತ್ತೊಂದೆಡೆ ಇವೇ ಪಾತ್ರಗಳ ಮೂಲಕ ಅಹಂಕಾರ ನಿರಸನ, ವಿಭ್ರಮಭ್ರಮ, ನಿರಸನಗಳು ಚಿತ್ರಿತವಾಗಿವೆ. ಅದ್ಭುತ ಕಲಾಪ್ರೌಢಿಮೆಯನ್ನು ಮೆರೆದಿದ್ದಾನೆ. ಪೂರ್ವ ಪುರಾಣಗಳೇ ಆಗಿವೆ. ಇದರ ಫಲವಾಗಿ 'ಆದಿಪುರಾಣ' ಪ್ರಾಚೀನ ಸಾಹಿತ್ಯದ ಮೊದಲ ಪುರಾಣ ಕೃತಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಭರತ-ಬಾಹುಬಲಿ ಪಾತ್ರಗಳು ವಿಶಿಷ್ಟ ರೀತಿಯಲ್ಲಿ ಚಿತ್ರಿಸಿರುವುದು ಪಂಪನ ಪ್ರತಿಭಾ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ. ಪೂರ್ವಪುರಾಣವನ್ನು ಪಂಪ ನೋಡಿರುವ ದೃಷ್ಟಿ ವಿನೂತನವಾದದ್ದು. 'ಆದಿಪುರಾಣ' ಮತ್ತು 'ಭರತೇಶವೈಭವ'ಗಳಲ್ಲಿ ಅಜ-ಗಜಾಂತರ ವ್ಯತ್ಯಾಸವನ್ನು ಕಾಣುತ್ತೇವೆ.

'ಭರತೇಶವೈಭವ' ಕೃತಿಯು ಮಧ್ಯಕಾಲೀನ ಕನ್ನಡ ಸಾಹಿತ್ಯಕ್ಕೆ ಒಂದು ವಿಶಿಷ್ಟವಾದ ಕೊಡುಗೆ. ರತ್ನಾಕರವರ್ಣಿಯು ಆದಿಪುರಾಣದ ಭರತ-ಬಾಹುಬಲಿ ಪ್ರಸಂಗವನ್ನು ತೆಗೆದುಕೊಂಡು ಅದರ ಮೂಲಕ ತನ್ನ ಕೃತಿಯನ್ನು ಕಟ್ಟಿಕೊಟ್ಟಿದ್ದಾನೆ.

'ಚಾವುಂಡರಾಯ ಪುರಾಣ', 'ಭರತೇಶವೈಭವ', 'ಚಂದ್ರಪ್ರಭಪುರಾಣ' ಇತ್ಯಾದಿ ಕೃತಿಗಳಿಗೆ ಅನೇಕ ನೆಲೆಗಳಲ್ಲಿ ಋಣಿಯಾಗಿರುವ ಈ ಕೃತಿಯ ಸ್ವೋಪಜ್ಞತೆಯಿರುವುದು ಜೈನಧರ್ಮ ತತ್ತ್ವಗಳ ಪ್ರಸಾರದಲ್ಲಿ ಮತ್ತು ಭರತ-ಬಾಹುಬಲಿ ಪಾತ್ರಗಳಿಗೆ ಕೊಡುವ ಪ್ರಾಮುಖ್ಯತೆಯಲ್ಲಿ ಎರಡೂ ಕೃತಿಗಳನ್ನು ಗಮನಿಸಿದಾಗ ಪಂಪನು ತನ್ನ 'ಆದಿಪುರಾಣ ಕೃತಿಯಲ್ಲಿ ತ್ಯಾಗಕ್ಕೆ ಹೆಚ್ಚು' ಪ್ರಾಮುಖ್ಯವನ್ನು ಕೊಟ್ಟಿರುವುದನ್ನು ಕಾಣುತ್ತೇವೆ. ಅದೇ ರೀತಿಯಲ್ಲಿ 'ಭರತೇಶವೈಭವ' ಕೂಡಾ ಜೈನಧರ್ಮದ ಹಿನ್ನೆಲೆಯಲ್ಲಿ ಬಂದಿರುವ ಕೃತಿ.

ಈ ಎಲ್ಲಾ ಹಿನ್ನೆಲೆಯಲ್ಲಿ ನೋಡಿದಾಗ 'ಆದಿಪುರಾಣ' ಮತ್ತು 'ಭರತೇಶವೈಭವ' ಕೃತಿಗಳ ವಸ್ತು ಒಂದೇ ಆದರೂ ನೋಡಿರುವ ದೃಷ್ಟಿ ಬೇರೆ ಬೇರೆಯಾಗಿದೆ. ಮಾನವ ಸ್ವಭಾವಗಳು ಇಲ್ಲಿ ಪ್ರಕಟವಾಗಿವೆ.

ಆದಿಪುರಾಣ ಕೃತಿಯು ಪ್ರಾಚೀನ ಕಾಲದಲ್ಲಿ ಮೂಡಿ ಬಂದ ಮಹಾನ್ ಕೃತಿಯಾಗಿರುವುದರಿಂದ ಹಾಗೆಯೇ ಇದು ಪೂರ್ವಪುರಾಣವನ್ನು ಆಧರಿಸಿ, ರಚಿತವಾಗಿದ್ದರೂ ಸಹ 'ಆದಿಪುರಾಣ' ಅದರ ಪಡಿಯಚ್ಚಲ್ಲ, ಪಡಿನೆರಳಲ್ಲ, ಇದೊಂದು ಮರುಸೃಷ್ಟಿ, ಹೊಸಸೃಷ್ಟಿ ಎಂಬುದರ ವಿವರವನ್ನು ದೀರ್ಘವಾಗಿ ಪರಿಶೀಲಿಸಿ ಇದರ ಹಲವಾರು ವಿವರಗಳನ್ನು ಮತ್ತು ಪಂಪ ಜಿನಸೇನರಿಗಿಂತ ಹೇಗೆ ಭಿನ್ನವಾಗಿದ್ದಾನೆ, ಯಾವ ಯಾವ ಅಂಶಗಳಲ್ಲಿ ಭಿನ್ನವಾಗಿದ್ದಾನೆ, ಭಿನ್ನವಾಗಿ ಗೆದ್ದಿದ್ದಾನೆಯೇ" ಎಂಬುದನ್ನು ಮುಂದೆ ನೋಡಬಹುದಾಗಿದೆ.

ಹಾಗೆಯೇ ಭರತ-ಬಾಹುಬಲಿಯರ ವ್ಯಕ್ತಿತ್ವ ದರ್ಶನ ಕೃತಿಯ ಸಂದರ್ಭದಲ್ಲಿ ಎಷ್ಟರಮಟ್ಟಿಗೆ ಮೂಡಿಬಂದಿದೆ ಎಂಬುದು ಗಮನಾರ್ಹ. ಪಂಪನು ಬಾಹುಬಲಿಯ ಪಾತ್ರವನ್ನು ಹೇಗೆ, ಎಷ್ಟರಮಟ್ಟಿಗೆ ಮೇಲ್ಮಟ್ಟಕ್ಕೇರಿಸಿದ್ದಾನೆ? ಅದು ಎಷ್ಟರಮಟ್ಟಿಗೆ ಸತ್ಯವಾದುದು? ಎಂಬುದನ್ನು ಮುಂದೆ ನೋಡಬಹುದಾಗಿದೆ.

'ಭರತೇಶವೈಭವ' ಕೃತಿಯು ಜೈನಧಾರ್ಮಿಕ ತತ್ತ್ವಗಳನ್ನು ಪ್ರಸಾರ ಮಾಡುವಲ್ಲಿ ಎಷ್ಟರಮಟ್ಟಿಗೆ ಯಶಸ್ವಿಯಾಗಿದೆ? ಪಾತ್ರಗಳು ಯಾವ ರೀತಿ ಭಿನ್ನತೆಯಿಂದ ಕೂಡಿದೆ. ಭರತನನ್ನು ವೈಭವೀಕರಿಸುವಲ್ಲಿ, ಭೋಗದಲ್ಲಿಟ್ಟುಕೊಂಡು ಮೋಕ್ಷ ಸಂಪಾದಿಸುವ ಪರಿಯನ್ನು ವರ್ಣಿಸುವಲ್ಲಿ ಸ್ವೋಪಜ್ಞತೆಯನ್ನು ಸಾಧಿಸಿದ್ದಾನೆಯೇ ಎಂಬುದನ್ನು ಮುಂದಿನ ಹಂತಗಳಲ್ಲಿ ನೋಡಬಹುದಾಗಿದೆ. ಭರತ-ಬಾಹುಬಲಿಯರ ಪಾತ್ರಗಳ ದೋಷ ಮತ್ತು ಗುಣಗಳನ್ನು ಹೇಗೆ ವರ್ಣಿಸಿದ್ದಾನೆ, ಜೈನ ಧರ್ಮ ಕಥೆಗೆ ಹಿನ್ನಲೆಯಾಗಿದೆಯೇ ಎಂಬುದನ್ನು ಸತ್ಯದ ದೃಷ್ಟಿಯಿಂದ ತೀರಾ ಹತ್ತಿರದಿಂದ ನೋಡಿ ಮುಂದಿನ ಹಂತಗಳಲ್ಲಿ ಇದಕ್ಕೆ ಉತ್ತರವನ್ನು ಕಂಡುಕೊಳ್ಳಬಹುದು. ಅದೇನೇ ಇದ್ದರೂ ಜೈನ ಧರ್ಮದ ತತ್ತ್ವಗಳು, ಅದರ ಮಹತ್ವವನ್ನು, ಭರತನ ಪಾತ್ರದ ವೈಭವೀಕರಣದ ಔನ್ನತ್ಯದಲ್ಲಿ ರತ್ನಾಕರವರ್ಣಿಯು ಗೆದ್ದಿದ್ದಾನೆ ಎಂದು ಹೇಳಬಹುದು.

ಆದಿಪುರಾಣದಲ್ಲಿ ಭರತ-ಬಾಹುಬಲಿಯ ಪ್ರಸಂಗ ಮುಖ್ಯ ಕಥೆಯಲ್ಲ. ಆದಿಪುರಾಣ ಕವಿಯ ಆಶಯಕ್ಕೆ ಪೂರಕವಾದುದು ಜೀವಿ ಲೌಕಿಕವನ್ನು ಹಂತಹಂತ-ವಾಗಿ ನಿರಾಕರಿಸುವುದು ಅಹಂಕಾರ ನಿರಸನ, ಅದೂ ಸಹ ತೊಡರು. ಗೆಲವಿನ

ಅಹಂಕಾರವು ಮನುಷ್ಯನ ಆತ್ಮನಾಶಕ್ಕೆ ಕಾರಣವಾದುದ್ದು. ಗೆದ್ದು ಮೀರಿದವನು ಬಾಹುಬಲಿ. ಪಂಪ ಅದನ್ನು ಬಳಸಿಕೊಂಡಿದ್ದಾನೆ.

ರತ್ನಾಕರವರ್ಣಿ ಭರತನನ್ನು ನಾಯಕನನ್ನಾಗಿ ಮಾಡಿಕೊಂಡು ಬದುಕಿನಲ್ಲಿ ಸಮನ್ವಯತೆ ತರಲು ಪ್ರಯತ್ನಿಸಿದ್ದಾನೆ. ತೀರ್ಥಂಕರರ ಕಥೆಯನ್ನು ತೆಗೆದು-ಕೊಳ್ಳುವುದು. ಆದರೆ ಪ್ರತಿನಾಯಕನಾದ ಭರತನನ್ನು ಇಲ್ಲಿ ರತ್ನಾಕರವರ್ಣಿ ತೆಗೆದು-ಕೊಂಡಿದ್ದಾನೆ.

ರತ್ನಾಕರವರ್ಣಿಯು ತನ್ನ ಕೃತಿಗೆ ಜೈನದಿಗಂಬರ ಸಂಪ್ರದಾಯದ ಪೂರ್ವ ಪುರಾಣವನ್ನು ಕನ್ನಡ ಸಂಸ್ಕೃತಿಯ ಪಂಪನ ಆದಿಪುರಾಣ ಇವೆರಡನ್ನೂ ಅನುಸರಿಸುತ್ತಾನೆ. ಇವನ ಕಥಾವಸ್ತುವಿಗೆ ಇವೆರಡೂ ಆಕರ ಗ್ರಂಥಗಳಾಗಿವೆ. ಪಂಪನಲ್ಲಿ ಕಂಡುಬರುವ ಒಂದು ಪ್ರಸಂಗವನ್ನು ಅಂದರೆ ಒಂದು ಭಾಗವನ್ನು ಮಾತ್ರ ತನ್ನ ಕಾವ್ಯ ವಸ್ತುವಾಗಿ ತೆಗೆದುಕೊಂಡಿದ್ದಾನೆ.

ಭರತ–ಬಾಹುಬಲಿಯರ ಯುದ್ಧ ಪ್ರಸಂಗ ಪಂಪನ ಕಾವ್ಯದಲ್ಲಿ ಒಂದು ರಸಗಟ್ಟಿ, ಪಂಪನು ಭರತನ ಅಹಂಕಾರ ನಿರಸನ ಮತ್ತು ಬಾಹುಬಲಿಯ ವ್ಯಕ್ತಿತ್ವದ ಔನ್ನತ್ಯವನ್ನು ಕಂಡರಿಸುವ ಉದ್ದೇಶವನ್ನಿಟ್ಟುಕೊಂಡು ತನ್ನ ಕಾವ್ಯವನ್ನು ರಚಿಸಿದ್ದಾನೆ. ಆದರೆ ರತ್ನಾಕರವರ್ಣಿಗೆ ಎಲ್ಲವೂ ಭರತನೇ ಆಗಿದ್ದಾನೆ. ಭರತನ ವ್ಯಕ್ತಿತ್ವವನ್ನು ವೈಭವೀಕರಿಸುವುದು ಔನ್ನತ್ಯದಲ್ಲಿ ನಿಲ್ಲಿಸುವುದೇ ರತ್ನಾಕರನ ಮುಖ್ಯ ಉದ್ದೇಶ. ಇವರಿಬ್ಬರಲ್ಲಿ ಮೂಲ ಉದ್ದೇಶದಲ್ಲೇ ಭಿನ್ನತೆಯಿದೆ. ಪರಿಣಾಮದಲ್ಲಿ ಸನ್ನಿವೇಶ ಚಿತ್ರಣದ ಸಾಧಕ ಬಾಧಕಗಳೇಣು ಎಂಬುದು ತಿಳಿದುಬರುತ್ತದೆ.

ಪಂಪನ ಪ್ರಕಾರ ಭರತನಿಗೆ ಆದಿನಾಥರಿಗೆ ಕೇವಲ ಜ್ಞಾನ ಪ್ರಾಪ್ತಿ. ಚಕ್ರರತ್ನ ಪ್ರಾಪ್ತಿ ಮತ್ತು ಪುತ್ರರತ್ನಪ್ರಾಪ್ತಿ ಉಂಟಾಗುತ್ತದೆ. ಭರತ ಆಧ್ಯಾತ್ಮಕ್ಕೆ ಮೊದಲ ಸ್ಥಾನ ಕೊಡುತ್ತಾನೆ. ಯುದ್ಧಗಳು ಆಚರಣೆಯ ಒಂದು ಮಾರ್ಗವಾಗಿಯೇ ಇರುತ್ತದೆ. ಯುದ್ಧಕ್ಕೆ ಅನಿವಾರ್ಯವಾಗಿ ಭರತ ಸಿದ್ಧನಾದಾಗಲೂ ಕ್ಷಾತ್ರಸಹಜಗುಣವನ್ನು ಪ್ರದರ್ಶಿದ್ದು ರಾಜ್ಯದಾಹ ಎನ್ನಿಸುವುದಿಲ್ಲ. 'ರಾಜ್ಯದಾಹ' ಅವನಲ್ಲಿ ಮೊದಲು ಉತ್ಪತ್ತಿಗೊಳ್ಳುವುದು ತಮ್ಮ ಬಾಹುಬಲಿ ಯುದ್ಧಕ್ಕೆ ಸಿದ್ಧನಾದಾಗ ಮಾತ್ರ. ಉಳಿದಂತೆ ಭರತ ಚಕ್ರವರ್ತಿ-ಯಾಗೇ ಉನ್ನತ ನಡವಳಿಕೆಯಿಂದ ಗಮನ ಸೆಳೆಯುತ್ತಾನೆ. ರತ್ನಾಕರನಿಗೆ ದಿಗ್ವಿಜಯ ಮುಖ್ಯವಾದ್ದರಿಂದ ಚಕ್ರರತ್ನದ ಪೂಜೆಗೆ ವಿಶೇಷ ಮಹತ್ವ ಕೊಡುತ್ತಾನೆ. ದಿಗ್ವಿಜಯ ಪ್ರಯಾಣ ರತ್ನಾಕರನ ದೃಷ್ಟಿಯಲ್ಲಿ ಯುದ್ಧಗಳ ಭರಾಟೆಯಲ್ಲಿ; ದೇಶ ಪರ್ಯಟನೆ, ಭರತನ ಆದರ್ಶಗುಣದ ಪರಿಚಯ. ಚಕ್ರರತ್ನದ ಮಹಿಮೆ ಕುರಿತು ಪಂಪ ಹೇಳಿದರೆ

ರತ್ನಾಕರವರ್ಣಿ ಏನನ್ನೂ ಹೇಳುವುದಿಲ್ಲ. ಚಕ್ರರತ್ನದ ಪ್ರಭಾವ ಪರಿಣಾಮ ಪಂಪನಲ್ಲಿ ಹೆಚ್ಚು ರಾಜರು ಕೂಡ ಭರತನಿಗಿಂತ ಚಕ್ರರತ್ನಕ್ಕೆ ಹೆಚ್ಚು ಮನ್ನಣೆ ಕೊಟ್ಟು ತಮ್ಮ ರಾಜ್ಯಗಳನ್ನೊಪ್ಪಿಸಿ ಶರಣಾಗಿಬಿಡುತ್ತಾರೆ. ಇಂಥ ಶರಣಾಗತಿ ರತ್ನಾಕರನಿಗೆ ಬೇಕಿಲ್ಲ. ಭರತನ ಮಹಿಮೆಯಿಂದಷ್ಟೇ ರಾಜರ ಸಾಮಂತರ ಶರಣಾಗತಿಯನ್ನು ನಿರೀಕ್ಷಿಸಿದವನು ರತ್ನಾಕರ. ಚಕ್ರರತ್ನದ ಉದಯ ಮಹತ್ವವಾಗದೇ 'ಬಾವಿಕರನಂತೆ ಉದಯಿಸಿತು' ಎಂದು ಹೇಳಿ ಅವರ ಪೂಜೆಯ ಮೂಲಕ ಅದರ ಮಹತ್ವವನ್ನು ಸೂಚಿಸುವ ಪ್ರಯತ್ನ ಮಾಡುತ್ತಾನೆಯೇ ಹೊರತು ಸ್ವರೂಪ, ಮಹತ್ವವನ್ನು ರತ್ನಾಕರ ಪಂಪನಂತೆ ನಿರೂಪಿಸುವುದಿಲ್ಲ.

ಚಕ್ರರತ್ನ ಹುಟ್ಟಿದ್ದರಿಂದ ದಿಗ್ವಿಜಯಕ್ಕೆ ಹೊಡರಡುವುದು ಅನಿವಾರ್ಯವಾದ ಬಗ್ಗೆ ಇಬ್ಬರು ಕವಿಗಳು ಹೇಳುತ್ತಾರೆ. ಪಂಪನ ಭರತ ಯುದ್ಧ ನಿರ್ಣಯದಲ್ಲಿ ಯಾರ ಅಪ್ಪಣೆಯನ್ನು ಕೇಳುವುದಿಲ್ಲ. ಆದರೆ ರತ್ನಾಕರನ ಭರತ ವಿಶೇಷವಾಗಿ ತಾಯಿಯ ಆಶೀರ್ವಚನವನ್ನು ನಿರೀಕ್ಷಿಸುತ್ತಾನೆ.

ದಿಗ್ವಿಜಯ ಯಾತ್ರೆಯ ಸಂದರ್ಭವು ಚಕ್ರವರ್ತಿಯೊಬ್ಬನ ಶೌರ್ಯ ಸಾಹಸಾದಿ ಪರಾಕ್ರಮಗಳಿಗೆ ಕನ್ನಡಿ ಹಿಡಿಯುವ ಪ್ರಯತ್ನ ಪಂಪನಲ್ಲಿದೆ. ಮೂಗಧಾಮರಕಥೆ ರಾಜರು ನವ ವಿನತಿಯರ ಪ್ರಸಂಗ ಇತ್ಯಾದಿ ಸಂಗತಿಗಳನ್ನು ಪಂಪನಂತೆಯೇ ರತ್ನಾಕರನೂ ತರುತ್ತಾನೆ.

ರತ್ನಾಕರನಿಗೆ ದಿಗ್ವಿಜಯ ಒಂದು ನಎಪ ಮಾತ್ರ. ಇದರ ಪರಿಣಾಮಕಾರಿ ಯಾಗಿ ರಣಕೋಲಾಹಲಕ್ಕಿಂತ ಮಕ್ಕಳಾಟವನ್ನು ರತ್ನಾಕರ ಚಿತ್ರಿಸುತ್ತಾನೆ. ಬೀಡುಬಿಟ್ಟ ಕಡೆಗಳಲ್ಲೆಲ್ಲಾ ವಿವಾಹ ವೇದಿಕೆಯ ನಿರ್ಮಾಣ, ಅಂಗ, ಕಳಿಂಗ, ಸಿಂಹಳ ಮುಂತಾದ ರಾಜರುಗಳೇ ಬಂದು ಭರತನ ದರ್ಶನ ಪಡೆಯುವಂತೆ ಯೋಚಿಸುತ್ತಾನೆ. ರಾಣಿಯರ ಜೊತೆ ಭರತನ ವಿಹಾರ, ಶೃಂಗಾರ ಲೋಕದಲ್ಲಿ ಮುಳುಗೇಳಿಸಿ ರಾಣಿಯರಿಗೆ ಪುತ್ರಸಂತಾನದ ಪ್ರಕಟಣೆ ಉತ್ಸವಾದಿಗಳನ್ನು ರೂಪಿಸುತ್ತಾನೆ. ವೃಷಭಾಚಲ ಪರ್ವತದಲ್ಲಿ ಪ್ರಶಸ್ತಿಯನ್ನು ಕೆತ್ತಿಸಿದ ಸನ್ನಿವೇಶ ಬರುತ್ತದೆ. ಆ ವೃಷಭಾಚಲ ಪರ್ವತವನ್ನು ಪಂಪ "ಯೋಜನೆಗಳು ಮೂಲ ವಿಸ್ತೃತಮುಂ ತಾವತ್ಪ್ರಮಾಣೋತ್ಸೇಧಮುಂ ತತ್ ಅರ್ದ್ ಪ್ರಮಿತ ಬಸರಿಮ ತಲೂಸ್ತಾರಮುಂ ಪಂಚವಿಂಶತಿ ಯೋಜನಾ ಅವಣಾಹಮುಂ" ಎಂದು ಹೇಳಿರುವುದನ್ನು ರತ್ನಾಕರ "ನೂರು ಗಾವುದದುದ್ದ ಮೊದಲದಚ್ಚಿತು ತಾನು ನೂರುಗಾವುದ ಮತ್ತೆ ಕ್ರಮದಿ ತಾರಿತಗ್ಗಿತು ನೋಡೆ ಪಗಡೆ ಕಾಯಂತೆ" ಎಂದು ನಿರೂಪಿಸುತ್ತಾನೆ. ಪಂಪನು ಭರತ ಆ ಪರ್ವತದಲ್ಲಿ ತನ್ನ ಪ್ರಶಸ್ತಿಯನ್ನು ಬರೆಸಲು

ಹೋದಾಗ ಪರ್ವತದ ತುಂಬೆಲ್ಲ ಹಿಂದೆ ಆಗಿ ಹೋದ ಚಕ್ರವರ್ತಿಗಳ ಹೆಸರುಗಳನ್ನು ಕಂಡು ತಾನೊಬ್ಬನೇ ಚಕ್ರವರ್ತಿ ಎಂಬ ಅಹಂಕಾರ ಕಳೆದುಕೊಂಡು ನಾಚಿಕೊಳ್ಳುವ ಪ್ರಸಂಗವನ್ನು ಹೇಳುತ್ತಾನೆ. ಇಷ್ಟಾಗಿಯೂ ಭರತ ನಾಚಿಕೆ ಪಟ್ಟುಕೊಂಡರೂ ದಂಡ ರತ್ನದಿಂದ ಒಂದು ಪ್ರಶಸ್ತಿಯನ್ನು ಅಳಿಸಿ, ಕಾಕಿಣೀರತ್ನದಿಂದ ತನ್ನ ನಿಜ ಪ್ರಶಸ್ತಿಯನ್ನು ಬರೆಸುತ್ತಾನೆ. ಭರತನಲ್ಲಿ ಸೋರಿಹೋದ ಗರ್ವರಸವನ್ನು ಪಂಪನು ವಿಸ್ತರಿಸುವುದಿಲ್ಲ. ಮುಂದೆ ನಿಜವಾದ ಅರ್ಥದಲ್ಲಿ ಭರತನ ಅಹಂಕಾರವನ್ನು ಪಂಪನಿಗೆ ಬಾಹುಬಲಿಯ ಮೂಲಕ ಮುರಿಯಬೇಕಿದೆ.

ಪಂಪನು ಬಾಹುಬಲಿ ವ್ಯಕ್ತಿತ್ವದಲ್ಲಿ ಆದಿನಾಥನ ಹತ್ತಿರ ಹತ್ತಿರ ನಿಲ್ಲುವವನಾಗಿದ್ದಾನೆ. ರತ್ನಾಕರನಲ್ಲಿ ಆದಿನಾಥನ ಹತ್ತಿ ನಿಲ್ಲುವವನು ಭರತ. ಆದ್ದರಿಂದಲೇ ಭರತನ ಪಾತ್ರಕ್ಕೆ ಎಲ್ಲೆಲ್ಲಿ ಮಾನವೀಯತೆಯ ಸ್ಪರ್ಶ ಕೊಡಬೇಕೋ ಅಲ್ಲೆಲ್ಲ ಎಡೆಬಿಡದೆ ಕೊಟ್ಟಿದ್ದಾನೆ. ಭರತನ ಗರ್ವರಸ ಸೋರಿದ್ದು ಪ್ರಶಸ್ತಿಯಿಂದಲ್ಲ. ಬದಲಿಗೆ "ಶೈಲವೆಲ್ಲವು ಲಿಪಿತುಂಬಿರೆ ನೋಡಿನ್ನಪಾಲನ ಗರ್ವ ಸೋರಿದುದು" ಎಂದು ಹೇಳುತ್ತಾನೆ. ಇವರಿಬ್ಬರಿಗಿಂತ ಜಿನಸೇನರು ಹೆಚ್ಚು ವಾಸ್ತವವಾದಿ ಎನ್ನಿಸುತ್ತದೆ. ಅವರು ಯಾರ ಪರವಾಗಿಯೂ ನಿಲ್ಲದೇ "ಲೋಕ ಪ್ರಾಯ" ಸ್ವಾರ್ಥ ಪರಾಯಣಂ" ಎಂದಷ್ಟೇ ಹೇಳುತ್ತಾನೆ. ಇದರ ಮೂಲಕ ಸ್ವಾರ್ಥವನ್ನು ಆದಿನಾಥನ ಮಗನೂ ಆದ ಭರತನಂತವನಿಗೂ ಮೀರಲಾಗಲಿಲ್ಲ ಎಂದ ಮೇಲೆ ಸಾಮಾನ್ಯರ ಪಾಡೇನು? ಎಂದು ಧ್ವನಿಸಿದ್ದಾರೆ.

ಪಂಪನ ಭರತನು ತಮ್ಮಂದಿರನ್ನು ಶತ್ರುಗಳೆಂದು ಭಾವಿಸಿರುತ್ತಾನೆ. ಭರತನು ಮಾನಸಿಕವಾಗಿ ತಮ್ಮಂದಿರನ್ನು ಎದುರಿಸಲು ಸಿದ್ಧನಾಗಿದ್ದನೆಂಬುದು ಗೋಚರಿಸುತ್ತದೆ. ದೂತರನ್ನಿಟ್ಟಿ ತಮ್ಮಂದಿರಲ್ಲಿಗೆ ಪತ್ರ ಕಳುಹಿಸುವ ಸನ್ನಿವೇಶದಲ್ಲಿ ಅವನ ತಮ್ಮಂದಿರ ಮಾತುಕತೆ ಅವರ ನಡವಳಿಕೆಯನ್ನು ನೋಡಿ ಭರತ ವಂಶಾನುಗತವಾಗಿ ವ್ಯಕ್ತಿತ್ವದ ಶ್ರೇಷ್ಠತೆಯನ್ನು ಗುರುತಿಸಿ, ಮನಸ್ಸಿನಲ್ಲಿಯೇ ಮೆಚ್ಚುಗೆ ವ್ಯಕ್ತಪಡಿಸುತ್ತಾನೆ. ಪಂಪನು ಈ ಸನ್ನಿವೇಶದಲ್ಲಿ ಅಣ್ಣತಮ್ಮಂದಿರ ಸ್ವಭಾವದ ಎತ್ತರವನ್ನು ಸೂಚಿಸುತ್ತಲೇ ಚಾಣಾಕ್ಷ ರಾಜನೀತಿಜ್ಞತೆಯನ್ನು ವ್ಯಕ್ತಪಡಿಸುತ್ತಾನೆ.

ರತ್ನಾಕರನು ಈ ಸನ್ನಿವೇಶವನ್ನು ಯಥಾವತ್ತಾಗಿ ತರುತ್ತಾನೆ. ಪಂಪನ ಹಾಗೆ ಸನ್ನಿವೇಶವನ್ನು ಕಟ್ಟದೇ ಪಾತ್ರಗಳ ಸಜ್ಜನಿಕೆಯನ್ನು ಪ್ರದರ್ಶಿಸದೇ, ಕೇವಲ ಕಥೆಯನ್ನು ಮಾತ್ರ ಹೇಳುತ್ತಿರುವಂತೆ ಕಾಣುತ್ತದೆ. ಇಲ್ಲಿ ಪುರೋಹಿತನ ಪ್ರಸ್ತಾಪ ಬರುವುದಿಲ್ಲ. ಪಂಪನಲ್ಲಿ ಪುರುಪರಮೇಶ್ವರನ ಸಾಮ್ರಾಜ್ಯ ಹಂಚಿಹೋಗದೆ ಅಖಂಡವಾಗಿತ್ತೆಂಬ

ಸೂಚನೆ ಸಿಗುತ್ತದೆ. ಆದರೆ ರತ್ನಾಕರನಲ್ಲಿ ಪುರು ಪರಮೇಶ್ವರನೇ ಮಕ್ಕಳಿಗೆ ರಾಜ್ಯವನ್ನು ಹಂಚಿದ್ದನೆಂದು, ತಂದೆ ಕೊಟ್ಟ ರಾಜ್ಯದಲ್ಲಿ ಭರತನ ತಮ್ಮಂದಿರೆಲ್ಲ ಸುಖವಾಗಿದ್ದರೆಂದು, ಬಾಹುಬಲಿಯು ಪಾದನಪುರವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದನೆಂದು ಸ್ಪಷ್ಟವಾಗಿದೆ. ಪಂಪನು ಭರತನ ತಮ್ಮಂದಿರು ಒಳಶತ್ರುಗಳಲ್ಲ ಎಂದಿದ್ದಾನೆ. ಹೊರಶತ್ರುಗಳೇ ಆದ್ದರಿಂದ ರತ್ನಾಕರ ಭರತನಿಗೆ ಅವರನ್ನು ಜಯಿಸುವ ಅನಿವಾರ್ಯ ಪ್ರಸಂಗವನ್ನು ಸೃಷ್ಟಿಸಿದ್ದಾನೆ. ಇದು ರತ್ನಾಕರನ ಜಾಣ್ಮೆಗೆ ಹಿಡಿದ ಕನ್ನಡಿಯಾಗಿದೆ. ಭರತ ತಮ್ಮಂದಿರಿಗೆ ಪತ್ರ ಕಳಿಹಿಸಿದ್ದು, ಅವರು ದೀಕ್ಷಾ ಬದ್ಧರಾದುದನ್ನು ರತ್ನಾಕರ ಮೂರು ಸಾಂಗತ್ಯದಲ್ಲಿ ಹೇಳಿ ಮುಗಿಸಿಬಿಡುತ್ತಾನೆ.

ರತ್ನಾಕರನ ಭರತನಿಗೆ ತಮ್ಮಂದಿರು ದೀಕ್ಷೆ ತೆಗೆದುಕೊಂಡಿದ್ದು ಮರುಕದ ವಿಚಾರವಾಗಿದೆ. ಇವನು ಪಂಪನಂತೆ ಸದೆಬಡೆಯಲೇಬೇಕು ಎಂಬಂತೆ ಕೋಪಾದಿಷ್ಟಾಗುವುದಿಲ್ಲ. ಚಕ್ರರತ್ನಕ್ಕೆ ತೋರಿಸಬಹುದಾದ ಗೌರವವನ್ನು ಎಲ್ಲರೂ ಸೂಸಲೇಬೇಕೆಂಬ ಆಶಯ ಮಾತ್ರವಿದೆ. ಇಲ್ಲದಿದ್ದಲ್ಲಿ ಚಕ್ರರತ್ನ ಹೋದ ಆಶಯ ಈಡೇರಿದಂತಾಗುವುದಿಲ್ಲ. ಆದ್ದರಿಂದಲೇ ಪ್ರತಿಯೊಂದು ಸಂಗತಿಯಲ್ಲಿ ರತ್ನಾಕರನ ಭರತ ಶಾಂತ ಚಿತ್ತತೆಯಿಂದ ತಣ್ಣಗೆ ವ್ಯವಹರಿಸುವುದನ್ನು ನೋಡುತ್ತೇವೆ. ಈ ದೃಷ್ಟಿಕೋನ ಬಾಹುಬಲಿಯೊಡನೆ ಹೋರಾಟಕ್ಕಿಳಿದ ಪ್ರಸಂಗದಲ್ಲೂ ವ್ಯಕ್ತವಾಗುತ್ತದೆ.

ಬಾಹುಬಲಿಯಲ್ಲಿಗೆ ಭರತನು ದೂತನನ್ನು ಕಳುಹಿಸಿದ ಪ್ರಸ್ತಾಪ ಪಂಪ ರತ್ನಾಕರರಿಬ್ಬರಲ್ಲೂ ಇದೆ. ಪಂಪ ದೂತನ ಹೆಸರನ್ನು ಹೇಳದಿದ್ದರೂ ಅವನು ಮಹಾಸಂಧಿ ವಿಗ್ರಹಿಯೂ, ವಕ್ರೋಕ್ತಿ ನಿಪುಣನೂ, ಸತ್ಕುಲ ಪ್ರಸೂತನು, ಸ್ಥಳೀಯನೂ, ಪ್ರತಿಭಾಸಂಪನ್ನನೂ ಆಗಿದ್ದನೆಂದು ಪರಿಚಯಿಸುತ್ತಾರೆ. ರತ್ನಾಕರನಲ್ಲಿ ದೂತನ ಹೆಸರು ದಕ್ಷಿಣಾಂಕ ಎಂದಿದೆ. ಅವನ ಬುದ್ಧಿವಂತಿಕೆ, ಚಾಣಾಕ್ಷತೆಯ ಬಗ್ಗೆ ನೇರ ವಿವರಗಳು ಇಲ್ಲದಿದ್ದರೂ ಬಾಹುಬಲಿಯೊಡನೆ ಅವನು ಸಂಭಾಷಿಸುವ ರೀತಿಯಿಂದಲೇ ನಮಗೆ ತಿಳಿಯುತ್ತದೆ. ಜೊತೆಗೆ ಸ್ವತಃ ಬಾಹುಬಲಿಯೇ 'ಬಲ್ಲವೈ ನೀನಿಷ್ಟು ಜಾಣನೆಂಬುದ ಮಾತಿನಲ್ಲಿ ನಮ್ಮನುಬಾಳೈಸದಿರು" ಹೇಳುವ ಮೂಲಕ ಇದು ಮತ್ತಷ್ಟು ಖಚಿತವಾಗುತ್ತದೆ.

ಪಂಪನ ದೂತನಿಗೆ ಬಾಹುಬಲಿಯ ರಾಜ್ಯದ ಸಮೃದ್ಧತೆ ತಿಳಿಯುತ್ತದೆ ರತ್ನಾಕರ ತನ್ನ ಭರತೇಶವೈಭವಕ್ಕೆ ತಕ್ಕಂತೆ ಬಾಹುಬಲಿಯ ವೈಭವವನ್ನು ಕಾಣಿಸಲು

ಪ್ರಯತ್ನಿಸಿದ್ದಾನೆ. ಪಂಪ ಬಾಹುಬಲಿಯ ನಡವಳಿಕೆಯಲ್ಲಿ ಚಕ್ರವರ್ತಿ ಭರತನ ಸಾಮ್ಯತೆಯನ್ನು ಗುರುತಿಸಿದರೆ, ರತ್ನಾಕರ ಒಬ್ಬ ಮನ್ಮಥನ ಚರ್ಯವನ್ನಷ್ಟೇ ಕಾಣುತ್ತಾನೆ.

ಪಂಪನ ದೂತ ಬಾಹುಬಲಿಯ ಬಳಿ ಬಂದು ಲೇಖನವನ್ನು ಓದುತ್ತಾನೆ. ದಿಗ್ವಿಜಯದ ಸಾರಾಂಶದ ಅವಲೋಕನ ಅಲ್ಲಿರುತ್ತದೆ. ಲೇಖನವನ್ನು ಓದುತ್ತಿದ್ದಂತೆ ಭರತನ ಹೊಗಳಿಕೆಯಲ್ಲಿ ಬಾಹುಬಲಿಗೆ ಅನುಮಾನ ಸುಗಮವಾಗುತ್ತದೆ. ಆ ದುರಂತ ಕೊನೆಗೆ



"ಪ್ರೀತಿಯ ತಮ್ಮನು ಜೊತೆಗಿಲ್ಲದಿದ್ದರೆ ಪಡೆದ ಸಾಮ್ರಾಜ್ಯವೆಲ್ಲ ವ್ಯರ್ಥವೆಂದೂ, ಆ ತಮ್ಮನು ಮೊದಲು ನಮಸ್ಕರಿಸದಿದ್ದರೆ ಮಹತ್ತಾದುದನ್ನು ಸಾಧಿಸಿದಂತಾಗುವುದಿಲ್ಲ" ಎಂಬುದನ್ನು ಅತ್ಯಂತ ಸೂಕ್ಷ್ಮವಾಗಿಯೇ ಹೇಳುತ್ತಾನೆ. ಇದನ್ನು ಕೇಳಿದ ಬಾಹುಬಲಿಗೆ ಅವನ ಉದ್ದೇಶ ತಿಳಿದು ಯುದ್ಧಕ್ಕೆ ತಾನು ಸಿದ್ಧನೆಂದು ಘೋಷಿಸುತ್ತಾನೆ. ಒಬ್ಬ ಸ್ವಾಭಿಮಾನಿ ಗಂಡಾಗಿ, ಕ್ಷಾತ್ರಗುಣಸಂಪನ್ನನಾಗಿ, ಸ್ವತಂತ್ರ ಬದುಕನ್ನು ಅಪೇಕ್ಷಿ ಪಟ್ಟವನಾಗಿ ಪಂಪನ ಬಾಹುಬಲಿ ತೋರುತ್ತಾನೆ. ಬಾಬಹುಬಲಿಯ ಮಾತಿನ ಮೂಲಕ ಅದಕ್ಕೆ ಕಾರಣವನ್ನು ತಿಳಿಯಪಡಿಸುತ್ತಾನೆ. ಭರತನೆಂದೂ ತನ್ನ ತಮ್ಮಂದಿರನ್ನು ಗೌರವವಾಗಿ ನಡೆಸಿಕೊಂಡವನಲ್ಲ ತಂದೆಯ ರಾಜ್ಯದಲ್ಲಿದ್ದು ಕಪ್ಪ ಕೊಡಬೇಕಾದ ಪರಿಸ್ಥಿತಿಯಲ್ಲಿ ತಾವಿದ್ದುದ್ದು; ಮಕ್ಕಳನ್ನು ಕಾಣುವಂತೆ ನಡೆಸಿಕೊಂಡಿದ್ದು, ತೊಂಡರ ಕರೆಸುವಂತೆ ಕರೆಸಿ ತನ್ನನ್ನು ದಂಡಿಸುತ್ತಿದ್ದದ್ದು ಮುಂತಾಗಿ ಗತಿಸಿದ ಘಟನೆಗಳನ್ನು ನೆನೆಯುವ ಬಾಹುಬಲಿ ಭರತನ ವಿನಯ ಹುಸಿ ಪ್ರದರ್ಶನವೆನ್ನುತ್ತಾನೆ. ಬಾಹುಬಲಿಯು ಅಸಮಾಧಾನಕ್ಕೆ ಅಣ್ಣ ಭರತನಷ್ಟೇ ಕಾರಣದಲ್ಲಿ ತಂದೆಯೂ ಕಾರಣ. ಸಮೃದ್ಧ ರಾಜ್ಯ ಭರತನಿಗೆ ಕೊಟ್ಟು ಕಿರಿಯ ರಾಜ್ಯವನ್ನು ತನಗೆ ಕೊಟ್ಟ ನೋವು ಅವನ ಮನಸ್ಸನ್ನು ಘಾಸಿ ಮಾಡಿರುತ್ತದೆ. ಯುದ್ಧಕ್ಕೆ ಸಿದ್ಧನಾದ ಬಾಹುಬಲಿಯ ಮನಸ್ಸನ್ನು ಸರಿಮಾಡಲು ತಾಯಿ ತನ್ನ ತಾಯ್ತನವನ್ನೇ ಪಣಕ್ಕಿಡುತ್ತಾಳೆ. ಮಡದಿ ಶೃಂಗಾರದ ಮಾತುಗಳಿಂದಲೇ ರಮಿಸುತ್ತಾ "ಬಿಲ್ಲುಕೊಂಕಲು ನಿನ್ನ ನಡೆ ಡೊಂಕೆ" ಬೇಡ ಯುದ್ಧ ಎನ್ನುತ್ತಾರೆ. ಮನಸ್ಸಿಗೆ ಖುಷಿ ಕೊಡದ ನಡವಳಿಕೆಯನ್ನು ಆಕ್ಷೇಪಿಸುತ್ತಾರೆ. ಅದಕ್ಕೆ ಬಾಹುಬಲಿಯ ಮನಸ್ಸು ಒಪ್ಪದಿದ್ದರೂ ಅವನು ತೋರ್ಪಡಿಸದೆ "ಕೋಪವಿರ್ದುದು ಮೊದಲೆನಗೆ ನಿಮ್ಮೆಲ್ಲರಾಲಾಪವ ಕೇಳ್ದು ತಂಪಾಯ್ತು" ಎಂದು ಸಮಾಧಾನಪಡಿಸುತ್ತಾನೆ. ಅದೇ ಸಂದರ್ಭದಲ್ಲಿ ತನ್ನ ಹೊರಡುವಿಕೆಯನ್ನವರು ನಿಷೇಧಿಸುಬಹುದೆಂದು ತಿಳಿದು "ಕೋಪತನದೊಳಣ್ಣನೆರಗಿ ಬಂದಿಪೆನ್" ಎಂದು ಭರವಸೆ ಕೊಡುತ್ತಾನೆ. ಅವನು ಸುಳ್ಳಿಗೆ ಕವಿರತ್ನಾಕರನ ಉದ್ಗಾರ "ಮೆದನಗೆ ವಂಚನೆ ಸಹಜ" ಎಂಬುದು. ಹೀಗೆ

ಇಲ್ಲಿ ರತ್ನಾಕರನು ಕೊಡುವ ಈ ಸನ್ನಿವೇಶದ ಎಲ್ಲಾ ವಿವರಗಳು ಜಿನಸೇನ ಪಂಪರಲ್ಲಿ ಬರುವುದಿಲ್ಲ. ರತ್ನಾಕರನ ಕಲ್ಪಿತ ಸನ್ನಿವೇಶವಾಗಿದೆ.

ಯುದ್ಧ ಅನಿವಾರ್ಯವಾಗುತ್ತದೆ. ಎರಡು ಸೈನ್ಯಗಳು ಎದುರುಬದುರಾಗಿ ನಿಲ್ಲುತ್ತವೆ. ಎರಡು ಪಕ್ಷದ ಮಂತ್ರಿಗಳು ಧರ್ಮಯುದ್ಧಕ್ಕೆ ಒಡಂಬಡಿಸುತ್ತಾರೆ. ಅದರಲ್ಲೂ ಪಂಪನಲ್ಲಿ ಉದ್ದೇಶಪೂರ್ವಕವಾಗಿ ಒಡಂಬಡಿಕೆಯಾಗುತ್ತದೆ. ಆದರೆ ರತ್ನಾಕರನಲ್ಲಿ ಅದು ಭರತನ ಸ್ವಭಾವಕ್ಕೆ ಸಹಜ ನಿರ್ಣಯವೇ ಆಗುತ್ತದೆ. ಏಕೆಂದರೆ ರತ್ನಾಕರನ ಭರತ, ಬಾಹುಬಲಿ ಯುದ್ಧಕ್ಕೆ ಬರುತ್ತಾನೆಂದು ತಿಳಿದು ಕಳವಳ, ಆತಂಕಕ್ಕೆ ಒಳಗಾಗುತ್ತಾನೆ. ಅದು ಯುದ್ಧ ಭೀತಿಯಿಂದಲ್ಲ. ಬಾಹುಬಲಿಯ ದುಡುಕುತನಕ್ಕೆ ಪುರುಪರಮೇಶ್ವರನನ್ನು ವ್ಯಕ್ತಿತ್ವವನ್ನು ಕಡೆಗಣಿಸುವಂತೆ ಯುದ್ಧ ವಿಚಾರಕ್ಕೆ. ಆದ್ದರಿಂದ ರತ್ನಾಕರ ಭರತ ಯುವ ಆತುರವನ್ನು ವ್ಯಕ್ತಪಡಿಸುವುದಿಲ್ಲ. ಮಾತಿನಲ್ಲೇ ಅವನನ್ನು ಮನುಷ್ಯನನ್ನಾಗಿಸುವ ಪ್ರಯತ್ನಕ್ಕೆ ಕೈ ಹಾಕುತ್ತಾನೆ. ಭರತನಲ್ಲಿರುವ ಉದಾತ್ತ ಮನಸ್ಸನ್ನು ಪರಿಚಯಿಸಲು ರತ್ನಾಕರ ಈ ಸನ್ನಿವೇಶವನ್ನು ಬಳಸಿಕೊಂಡಿದ್ದಾನೆಂದು ಎನಿಸುತ್ತದೆ.

ಯುದ್ಧಕ್ಕೆ ಬಾಹುಬಲಿ ಹೊರಟಾಗ ಹಲ್ಲಿ ನುಡಿಯಿತು. ಜನಪದರ ಪ್ರಕಾರ ಎಲ್ಲಿಗಾದರೂ ಹೊರಡುವಾಗ ಹಲ್ಲಿ ನುಡಿದರೆ ಅಪಶಕುನ. ಮಂತ್ರಿ ಅಡ್ಡಗಾಲು ಹಾಕಿದರೂ ಬಾಹುಬಲಿ ಲೆಕ್ಕಿಸದೇ ಇದೇ 'ಮಹಾಲಗ್ನ' ಎನ್ನುತ್ತಾನೆ. ಇಲ್ಲಿ ರತ್ನಾಕರನು ಭರತನ ಮಗ ಅರ್ಕಕೀರ್ತಿ ಚಿಕ್ಕಪ್ಪನಿಗೆ ಕಪ್ಪಕಾಣಿಕೆ ಕೊಟ್ಟು ಮನಸ್ಸನ್ನು ಸಮಾಧಾನ ಪಡಿಸಲು ಯತ್ನಿಸಿ ವಿಫಲನಾದ ಸಣ್ಣಪ್ರಸಂಗವನ್ನು ಹೊಸೆದಿದ್ದಾನೆ. ಹಾಗೆ ಬಾಹುಬಲಿಯ ಹಾಗೇ ಬಾಹುಬಲಿಯ ಮಗ ಮಹಾಬಲನು ದೊಡ್ಡಪ್ಪನಾದ ಭರತನ ಬಳಿ ಬಂದು ತನ್ನ ಅಸಹಾಯಕತೆ ಸೂಚಿಸಿದ ಪ್ರಸಂಗವೂ ಹೊಸದಾಗಿ ಬಂದಿದೆ. ಯುದ್ಧಕ್ಕೆ ಬಂದ ಸಂದರ್ಭದಲ್ಲಿ ಭರತ ಅವನ ಮಗನನ್ನು ತನ್ನ ಮಗನಂತೆ ಆಧರಿಸಿ ತೊಡೆಯಮೇಲೆ ಕುಳ್ಳಿರಿಸಿಕೊಂಡು ಸಮಾಧಾನ ಪಡಿಸಿದ ಸಂಗತಿ ಸಣ್ಣ ವಿಷಯವೇನಲ್ಲ. ಸಹಜವಾಗಿ ಭರತನ ವ್ಯಕ್ತಿತ್ವವನ್ನು ಉನ್ನತೀಕರಿಸುವಂಥದ್ದೇ ಆಗಿದೆ.

ಯುದ್ಧ ಧರ್ಮಯುದ್ಧವಾಗಿ ನಿರ್ಧಾರವಾಗುತ್ತದೆ. ಎರಡೂ ಕಾವ್ಯಗಳಲ್ಲೂ ಭರತನ ಸೈನ್ಯ ದೊಡ್ಡದು, ಬಾಹುಬಲಿಯ ಸೈನ್ಯ ಚಿಕ್ಕದಾಗಿರುತ್ತದೆ. ಎಂದು ಒಂದೇ ರೀತಿಯಲ್ಲಿ ನಿರೂಪಿತಗೊಂಡಿದೆ. ಆದರೆ ಯುದ್ಧ ಸಂದರ್ಭದಲ್ಲಿ ಮಾತ್ರ ಪರಸ್ಪರ ಭಿನ್ನರಾಗುತ್ತಾರೆ.

ಪಂಪನ ಬಾಹುಬಲಿ ಯುದ್ಧಕ್ಕೆ ಮೊದಲು ಸಿದ್ಧನಾಗುವುದಿಲ್ಲ. ತನ್ನ ಸೈನ್ಯ ಚಿಕ್ಕದು, ಅದಕ್ಕಾಗಿ ಭರತನ ಚತುರಂಗ ಬಲದೊಂದಿಗೆ ಯುದ್ಧ ಮಾಡುತ್ತೇನೆ

ಎನ್ನುತ್ತಾನೆ. ಆದರೆ ಮಂತ್ರಿಗಳು ಒತ್ತಾಯಪೂರ್ವಕವಾಗಿ ಬೇಡವೆಂದಾಗ ಪ್ರಜೆಗಳ ಹಿತದೃಷ್ಟಿಯಿಂದ ಒಪ್ಪಿಕೊಂಡು ತನ್ನ ದೊಡ್ಡತನವನ್ನು ಪ್ರದರ್ಶಿಸುತ್ತಾನೆ. ಬಾಹುಬಲಿ, ಪಂಪನಲ್ಲಿ ಮುಂದೆ ನಡೆದ ಎಲ್ಲಾ ಯುದ್ಧಗಳಲ್ಲಿ ಭರತ ಸೋಲುತ್ತಾನೆ. ಆದರೂ ಭರತನು ಸೋದರತ್ವವು ದೊಡ್ಡದೆಂದು ಭಾವಿಸದೇ ರಾಜ್ಯದಾಹದ ಬಗ್ಗೆ ನಿರಸವನ್ನು ಸೂಚಿಸುವುದಿಲ್ಲ. ಚಕ್ರರತ್ನದ ಬಲ ಗೊತ್ತಿದ್ದರಿಂದ ತನ್ನಿಂದಾಗದ ಕೆಲಸವನ್ನು ಚಕ್ರರತ್ನದಿಂದ ಮಾಡಿಸಹೋಗಿ ಅದು ಬಾಹುಬಲಿಗೆ ಪ್ರದಕ್ಷಿಣೆ ಹಾಕಿ ಪಕ್ಕದಲ್ಲಿ ನಿಂತುಕೊಂಡಾಗ ಭರತ ಕಾಂತೀಹೀನನಾಗುತ್ತಾನೆ. ತನ್ನ ತಪ್ಪಿನ ಅರಿವಾಗುತ್ತದೆ. ಗುರುಹಿರಿಯರ ಮಾತನ್ನು ಮನ್ನಿಸಿದ ತನ್ನ ಅವಿವೇಕಕ್ಕೆ ನಾಚಿಕೆಯಿಂದ ತಲೆ ತಗ್ಗಿಸುತ್ತಾನೆ. ಇತ್ತ ಬಾಹುಬಲಿ ಅಣ್ಣತಮ್ಮಂದಿರ ಸಂಬಂಧವನ್ನೇ ಕೆಡಿಸುವ ಈ ಯುದ್ಧ, ಈ ಭೂಮಿ, ಈ ರಾಜ್ಯವನ್ನೆಲ್ಲಾ ಕ್ಷಣ ಮಾತ್ರದಲ್ಲಿ ನಿರಾಕರಿಸಿ ದೀಕ್ಷೆಗೆ ಸಿದ್ಧನಾಗುತ್ತಾನೆ.

ಪಂಪನ ಈ ಚಿತ್ರಣದಲ್ಲಿ ಬಾಹುಬಲಿಯ ವ್ಯಕ್ತಿತ್ವದ ಔನ್ನತ್ಯವನ್ನು ಮಹಾನುಭಾವತ್ವವನ್ನು ಏಕಕಾಲದಲ್ಲಿ ಪ್ರದರ್ಶಿಸಿದರೆ, ಭರತನ ರಾಜ್ಯದಾಹ ಮತ್ತು ಹುಂಬತನವನ್ನು ಅದೇ ಸಂದರ್ಭದಲ್ಲಿ ಕಾಣುತ್ತೇವೆ. ರತ್ನಾಕರನಲ್ಲಿ ಇದ್ಯಾವುದೂ ಕಂಡುಬರುವುದಿಲ್ಲ. ರತ್ನಾಕರನ ನಾಯಕ ಭರತನಾಗಿರುವುದರಿಂದ ಅರ್ಹತೆ ಅನರ್ಹತೆಯ ಪ್ರಶ್ನೆಯೇ ಇಲ್ಲಿ ಉದ್ಭವಿಸುವುದಿಲ್ಲ. ಏಕೆಂದರೆ ಇಲ್ಲಿ ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧ ನಡೆಯಲಿಲ್ಲ. ಮಾತುಗಳಲ್ಲೇ ಯುದ್ಧ ನಡೆಯುತ್ತದೆ. ಅದನ್ನು ಮಾತಿನ ಯುದ್ಧವೆಂದು ಹೇಳುವುದೂ ಕೊಂಚ ಕಷ್ಟವೇ ಅಣ್ಣ ತಮ್ಮನಿಗೆ ಹೇಳಬಹುದಾದ ಉಪದೇಶೋಕ್ತಿ.

ಧರ್ಮಯುದ್ಧ ಘೋಷಿಸಿದಾಗ ಸದ್ದಿಲ್ಲದೇ ಒಪ್ಪಿಕೊಳ್ಳುವುದಕ್ಕೆ ಕಾರಣ ತನ್ನ ಸೈನ್ಯ ಚಿಕ್ಕದೆಂದು ಎನ್ನುತ್ತಾನೆ ರತ್ನಾಕರ. ಭರತನಿಗೆ ಬಾಹುಬಲಿ ಯುದ್ಧದಲ್ಲಿ ಸೋತರೆ ತಪಸ್ಸಿಗೆ ಹೋಗಿಬಿಡಬಹುದೆಂಬ ಆತಂಕ, ಭಯ ಇದೆ. ಪಂಪನ ಭರತನಿಗೂ ಈ ಬಗೆಯ ಆತಂಕವಿದೆ. ಸಂದರ್ಭ ಮಾತ್ರ ಅದಲುಬದಲು. ಪಂಪನಲ್ಲಿ ಯುದ್ಧದಲ್ಲಿ ಗೆದ್ದು ಬಾಹುಬಲಿ ಲೌಕಿಕತೆಯನ್ನು ನಿವಾರಿಸಿಕೊಂಡು ತಪಸ್ಸಿಗೆ ಸಿದ್ಧನಾದಾಗ ಮನುವಂಶಕ್ಕೆ ನೀನೊಬ್ಬನು ಮಾತ್ರ ಉಳಿದಿದ್ದೀಯ ತಪಸ್ಸಿಗೆ ಹೋಗಬೇಡ ಎನ್ನುತ್ತಾನೆ. ರತ್ನಾಕರನಲ್ಲಿ ಯುದ್ಧ ಪೂರ್ವದಲ್ಲಿಯೇ ತಾನೇ ಸೋಲುವ ನಿರ್ಧಾರಕ್ಕೆ ಬರುತ್ತಾನೆ.

ಮುಂದುವರಿದು ಭರತ ಪಂಪನಿಗೆ ಬಾಹುಬಲಿಯ ಮೇಲೆ ಚಕ್ರವನ್ನು ಪ್ರಯೋಗಿಸಿದೆ, ಭುಜಬಲಿಯನ್ನು ಒಲ್ಲೈಸುವಂತೆ ಕೇಳುತ್ತಾನೆ. ಆದರದು ಹೋಗು–

ವುದಿಲ್ಲ. ಅವನು ಪುಣ್ಯವಂತನಲ್ಲವೆಂದು ಚಕ್ರರತ್ನ ನಿರ್ಧರಿಸಿಬಿಡುತ್ತದೆ. ಬಾಹುಬಲಿ-ಯೆದುರೇ "ಎರೆಲೆ ಪಿಶಾಚ ಹೋಗೆಂದರೇತಕೆ ಹೋಗೆ, ಕಲಹ ನಿನ್ನಿಂದಾದುದೆನಗೆ" ಎಂದು ತಾನೇ ದೂರ ಸರಿಸುತ್ತಾನೆ. ಆದರದು "ಬಳೆ ಜಾರುವಂತೆ" ಜಾರುತ್ತದೆ. ಆಗ ಬಾಹುಬಲಿಗೆ ತನ್ನ ಅಸ್ತಿತ್ವದ ವಸ್ತುಸ್ಥಿತಿ ಅರಿವಾಗುತ್ತದೆ. ಕುದಿಯುತ್ತಿದ್ದ ಹೃದಯ ತಂಪಾಗುತ್ತದೆ. ಪಶ್ಚಾತ್ತಾಪಗೊಳ್ಳುತ್ತಾನೆ. ಅಣ್ಣನ ಮೊಗವನ್ನು ನೋಡಲಾಗದೆ ತಲೆತಗ್ಗಿಸುತ್ತಾನೆ. ಯುದ್ಧವಿಲ್ಲದೇ ಮಾತಿನಲ್ಲೇ ಮುಕ್ತಾಯವಾದ ಕದನವನ್ನು ಕಂಡು ಪ್ರಜಾಕೋಟಿ ಹರ್ಷಗೊಳ್ಳುತ್ತದೆ.

ಪಂಪನ ಕಾವ್ಯದಲ್ಲಿ ಬಾಹುಬಲಿ ಗೆದ್ದು, ಸೋತವನಂತೆ ಅಣ್ಣನ ಮೇಲೆ ಕೈ ಮಾಡಿದ್ದಕ್ಕೆ ಪಶ್ಚಾತ್ತಾಪಗೊಂಡು ತಪಸ್ಸಿಗೆ ಸಿದ್ಧನಾಗಿಯೇ ಬಿಡುತ್ತಾನೆ. ರತ್ನಾಕರನಲ್ಲಿ ಸೋತು ಗೆಲ್ಲುತ್ತಾನೆ ಬಾಹುಬಲಿ. ಅಣ್ಣತಮ್ಮಂದಿರ ಮಾತುಕತೆ ಪಂಪನಂತೆ ಇಲ್ಲಿಗೆ ಮುಕ್ತಾಯವಾಗುವುದಿಲ್ಲ. ಈ ಬಾಹುಬಲಿ ತಪಸ್ಸಿಗೆ ಹೋಗಲು ನಿರ್ಧರಿಸುವುದಕ್ಕೆ ಮೊದಲು ಭರತನಲ್ಲಿ ಕ್ಷಮೆ ಯಾಚಿಸುತ್ತಾನೆ. ಅಣ್ಣನನ್ನು ದೇವರ ಸ್ಥಾನದಲ್ಲಿಟ್ಟು ಗೌರವಿಸುತ್ತಾನೆ. ಬಾಹುಬಲಿಯ ನಿಶ್ಚಯ ಬದಲಾಯಿಸಲು ಪಂಪನ ಭರತ ಪ್ರಯತ್ನಿಸುತ್ತಾನೆ. ಆದರೆ ರತ್ನಾಕರ ಸಹಜ ಸಂವಾದ ರೂಪದಲ್ಲಿ ಅದೇ ಆಶಯವನ್ನು ದೀರ್ಘಗೊಳಿಸುತ್ತಾನೆ. ಭರತ ಮಾತಾಡಿದಷ್ಟು ಬಾಹುಬಲಿ ಹೆಚ್ಚು ಹೆಚ್ಚು ವಿನಯವಂತನಾಗುತ್ತಾನೆ. ಮೊದಲೇ ನಾಚಿದ್ದ ಬಾಹುಬಲಿಯ ಮನಸ್ಸು ಮತ್ತಷ್ಟು ನಾಚಿಕೆಯಿಂದ ಪಶ್ಚಾತ್ತಾಪದಿಂದ ಮುದುಡಿಕೊಳ್ಳುವಂತೆ ಮಾಡುತ್ತದೆ. ದೀಕ್ಷೆಗೆ ಹೋಗುವ ನಿರ್ಧಾರ ಮಾಡುತ್ತಾನೆ. ರತ್ನಾಕರನು ತಕ್ಷಣ ಭರತನ ಪ್ರತಿಕ್ರಿಯೆಯನ್ನು ಹೀಗೆ ಸೂಚಿಸುತ್ತಾನೆ. ಬಗೆಬಗೆಯಾಗಿ ತಮ್ಮನನ್ನು ಶಾಂತಗೊಳಿಸುತ್ತಾನೆ. ಭರತನು ದೀಕ್ಷೆಗೆ ಹೋಗದಂತೆ ಅವನನ್ನು ತಡೆಯಲು ಯತ್ನಿಸಿದಷ್ಟು ಬಾಹುಬಲಿಯ ನಿರ್ಧಾರ ಹೆಚ್ಚು ಹೆಚ್ಚು ಗಟ್ಟಿಗೊಳ್ಳುತ್ತದೆ. ಕೊನೆಗೂ ಬಾಹುಬಲಿ ದೀಕ್ಷೆಗೆ ಹೊರಟೇಬಿಟ್ಟ. ಅತ್ಯಂತ ಗಂಭೀರವಾದ ಇಂಥ ಸನ್ನಿವೇಶದಲ್ಲೂ ರತ್ನಾಕರ ಇಬ್ಬರು ಸೈನಿಕರ ಮೂಲಕ ಬಾಹುಬಲಿಗೆ ಒದಗಿದ ಸ್ಥಿತಿಗೆ ಅವನದೇ ಸ್ವಯಂ ಅಪರಾಧ ಎಂಬುದನ್ನು ಖಾತರಿಪಡಿಸುತ್ತಾನೆ. ಸೈನಿಕರ ಮಾತಿನಲ್ಲಿರುವ ಕಟಕಿಗೆ ತಕ್ಷಣ ಬಾಹುಬಲಿ ಕುಪಿತಗೊಳ್ಳುತ್ತಾನೆ. ಮರುಕ್ಷಣ "ತಪಸಿಗೆಯುವಗೆ ಸೈರಣೆ ಮುಖ್ಯ"ವೆಂದು ಭಾವಿಸಿ ನಿರ್ಲಿಪ್ತನಾಗಿ ನಡೆಯುತ್ತಾನೆ. ಇಲ್ಲಿ ಕವಿ ಸಾಂದರ್ಭಿಕವಾಗಿ ಬಾಹುಬಲಿಗೆ ನಿರ್ಲಿಪ್ತತೆಯ ಗುಣವನ್ನು ಮುಂದುಮಾಡುತ್ತಾನೆ. ಆದರೆ ಸೈನಿಕರ ಮಾತನ್ನು ಬಾಹುಬಲಿ ಪೂರ್ಣವಾಗಿ ಮರೆಯಲಿಲ್ಲ. ತಪಸ್ಸು ಮಾಡಿಯೂ ಮುಕ್ತಿಯಿಲ್ಲದೇ

ದ್ವಂದ್ವ ಮನಸ್ಕನಾಗಿ ಬಾಹುಬಲಿ ತೊಳಲಾಡುವ ಸಂದರ್ಭವೇ ಇದಕ್ಕೆ ಸಾಕ್ಷಿ. ಈ ಬಗೆಯ ನಿರ್ವಹಣೆ ರತ್ನಾಕರನದೇ ಆಗಿದೆ.

ಪಂಪನಲ್ಲಿ ಬಾಹುಬಲಿ ದೀಕ್ಷೆಗೆ ಹೋಗುವ ಸಂದರ್ಭದಲ್ಲಿ ಅರಮನೆಯಲ್ಲಿ ಅಳಲಿನ ಚಿತ್ರಣವೇ ಬರುವುದಿಲ್ಲ. ಪಂಪನಿಗದು ಮುಖ್ಯ ಎನಿಸುವುದಿಲ್ಲ. ಕಾರಣ ಅವನು ಕಾಮನದೇವ. ರತ್ನಾಕರನ ಬಾಹುಬಲಿ ಸಕಲಕಲಾವಲ್ಲಭ, ರತ್ನಾಕರನ ಬಾಹುಬಲಿ ಭಾಗವತದ ಕೃಷ್ಣನಂತೆ ಹಲವು ಹಲವು ಹೆಂಡಿರ ಗಂಡ, ಆದ್ದರಿಂದಲೇ ಬಾಹುಬಲಿ ದೀಕ್ಷೆಗೆ ಹೋದದ್ದು. ರತ್ನಾಕರನಿಗೆ ಅವನೊಬ್ಬನ ವ್ಯಕ್ತಿಗತ ಸಾಧನೆಯಾಗಷ್ಟೇ ನಿಲ್ಲುವುದಿಲ್ಲ. ಇಡೀ ಅರಮನೆಯ ವಿಷಯವಾಗಿ ದುಃಖ ದುಮ್ಮಾನಗಳನ್ನು ಸೃಷ್ಟಿಸಿಬಿಡುತ್ತದೆ. ಇಲ್ಲಿಯೇ ಚಿಕ್ಕಮ್ಮ ಸುನಂದಾದೇವಿಗೂ ಭರತನಿಗೂ ಸಂವಾದವನ್ನು ರೂಪಿಸಿ, ರತ್ನಾಕರ ಪರಪಸ್ಪರ ಮನಃಕಷಾಯವನ್ನು ತೊಡೆದು ಹಾಕುತ್ತಾನೆ. ಇದೆಲ್ಲ ಮೂಲದಲ್ಲಿ ಇಲ್ಲ. ರತ್ನಾಕರನೇ ಸೃಷ್ಟಿಸಿರುವ ಸಂದರ್ಭ ಸನ್ನಿವೇಶಗಳು ಬೆಳೆಸಿರುವ ಕಥಾಗತಿ. ಇದು ಇಲ್ಲಿಗೆ ನಿಲ್ಲುವುದಿಲ್ಲ. ಕವಿಯ ಮೂಲ ಉದ್ದೇಶವೇ ಭರತನನ್ನು ಮಾನವೀಯ ನೆಲೆಯಲ್ಲಿ ಚಿತ್ರಿಸುವುದು.

ರತ್ನಾಕರನ ಭರತ ಅರ್ಕಕೀರ್ತಿಗೆ ಯುವರಾಜ ಪಟ್ಟ ಕಟ್ಟಿ ಎಲ್ಲಾ ಕಾರ್ಯಗಳನ್ನು ನೆರವೇರಿಸಿದ. ಭರತ ಎಂಥಾ ಸಂದರ್ಭದಲ್ಲೂ ಹಂಸನಾಥನ ನೆನಪನ್ನು ಮರೆಯದೇ ಧ್ಯಾನಿಸುತ್ತಿದ್ದ ಎಂದು ರತ್ನಾಕರ ಮತ್ತೆ ಮತ್ತೆ ಓದುಗರಿಗೆ ಖಾತರಿ ಮಾಡಲು ಪ್ರಯತ್ನಿಸುತ್ತಾನಾದರೂ ಭರತನ ವ್ಯವಹಾರಗಳನ್ನು ಕಂಡಾಗ ಕೇವಲ ಹೇಳಿಕೆಯಾಗಿ ನಿಲ್ಲುವಂತೆ ತೋರುತ್ತದೆ. ಏಕೆಂದರೆ ಭರತಚಕ್ರ ಸಾಂದರ್ಭಿಕವಾಗಿ ಅಲ್ಲಲ್ಲಿ ಜಿನಪೂಜೆ ನಡೆಸುವುದನ್ನು ಬಿಟ್ಟರೆ ಅದಕ್ಕಾಗಿ ಪ್ರತ್ಯೇಕ ಸಮಯವೆಂದು ಭರತನಿಗಿರುವುದೇ ಇಲ್ಲ. ಹೀಗಾಗಿ ರತ್ನಾಕರ ಭರತನ ವ್ಯಕ್ತಿತ್ವವನ್ನು ರೂಪಿಸುವಾಗ ಭೇದವಿಜ್ಞಾನದ ಬಗ್ಗೆ ಆಗಾಗ ಹೇಳುತ್ತಾನೆ. ಬಹುಶಃ ಯೋಗ ಭೋಗದ ಸಮನ್ವಯವೆಂದರೆ ಇದೇ ಆಗಿರಬೇಕು.

ಬಾಹುಬಲಿಯೆ ಮನಃ ಕಷಾಯವನ್ನು ನೀಗಿದ್ದು, ಇಲ್ಲಿ ಜಿನಸೇನರನ್ನೇ ಪಂಪ ಅನುಸರಿಸಿದರೆ, ಪಂಪನನ್ನು ತೆಳುವಾಗಿ ಅನುಸರಿಸುವ ಕೆಲಸವನ್ನು ರತ್ನಾಕರ ಮಾಡಿದ್ದಾನೆ. ಪಂಪನ ಭರತ ಬಾಹುಬಲಿಯ ದೀಕ್ಷೆಯ ಜೊತೆಗೆ ಮಾನಸಿಕವಾಗಿ ಲೌಕಿಕ ಸಂಬಂಧವನ್ನು ಕಡಿದುಕೊಂಡಿದ್ದಾನೆ. ಕರ್ತವ್ಯದೃಷ್ಟಿ ಮಾತ್ರ ಉಳಿದಿರುತ್ತದೆ. ರತ್ನಾಕರನಿಗೆ ಅದು ಕೇವಲ ಕರ್ತವ್ಯವಲ್ಲ ಜವಾಬ್ದಾರಿ. ಲೌಕಿಕತೆಯ ಫಲಾಯನವನ್ನಲ್ಲ. ಎಲ್ಲರನ್ನು ನೋಡುವ, ಎಲ್ಲವನ್ನು ಸೇರ್ಪಡಿಸುವ ಹೊಣೆಗಾರಿಕೆ ಅವನ ಹೆಗಲ ಮೇಲಿದೆ. ರತ್ನಾಕರನ ಭರತ, ಪ್ರತಿಮಾಯೋಗದಲ್ಲಿದ್ದು ಬಾಹುಬಲಿಯನ್ನು ನೋಡುವ

ನಡುವೆ ಸಹಜವಾಗಿ ಕಾಲ ಸಾಕಷ್ಟು ಜಾರಿದೆ. ಅದನ್ನು ಗಮನಿಸುವಷ್ಟು ಸಮಯಾವಕಾಶವು ರತ್ನಾಕರನ ಭರತನಿಗೆ ಇಲ್ಲ. ಹೀಗಾಗಿ ಈ ಭರತನಿಗೆ ಬಾಹುಬಲಿಯ ನೆನಪು ಮೂಡುತ್ತದೆ. ಇಲ್ಲೆಲ್ಲ ರತ್ನಾಕರ ಮನುಷ್ಯ ಸಂಬಂಧಗಳನ್ನು ಸಂಸಾರದ ಗತಿಯನ್ನು ಚಕ್ರವರ್ತಿಯಾಗಿದ್ದರೂ ಬಿಡದ ನೆಂಟನ್ನು ಸಾವಯವ ದೃಷ್ಟಿಯಿಂದ ಸಮಚಿತ್ತತೆಯಿಂದ ಸಂದರ್ಭದಿಂದ ದೂರನಿಂತು ಅವಲೋಕಿಸಿ ಅಭಿವ್ಯಕ್ತಿಸುತ್ತಾ ಹೋಗುತ್ತಾನೆ. ಇದು ಕಥೆಯ ಹೆಗ್ಗಳಿಕೆ ಮಾತ್ರವಲ್ಲ. ಕಥೆ ಕಟ್ಟುವ ಜಾಣ್ಮೆಯೂ ಹೌದು. ಅದನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾನೆ ರತ್ನಾಕರ. ಇಷ್ಟೊಂದು ವಿವರ ಪಂಪನಲ್ಲಿ ಕಾಣಸಿಗುವುದಿಲ್ಲ. ಅವನಿಗೆ 'ಆದಿನಾಥ' ಮುಖ್ಯನೇ ಹೊರತು ಭರತನಲ್ಲಿ ಎಂಬುದನ್ನು ನಾವು ಮರೆಯಬಾರದು.

ಪಂಪನ ಭರತನಿಗೆ ಬಾಹುಬಲಿಯ ನೆನಪಾಗುತ್ತದೆ. ಆಗ ಬಾಹುಬಲಿ ಹೇಗಿದ್ದನೆಂಬುದು ತಿಳಿದುಬರುತ್ತದೆ. ಕಾಲುಗಳನ್ನು ಹಿಡಿದಿದ್ದ ಹುತ್ತ, ಹುತ್ತದ ಮೇಲಿಂದ ಎತ್ತರವಾಗಿ ಬೆಳೆದಿದ್ದ ಬಳ್ಳಿ, ಬಳ್ಳಿಗಳನ್ನು ಹಿಡಿದಿದ್ದ ವಿಷದ ಹಾವುಗಳು, ಅವುಗಳು ಬಿಡುತ್ತಿದ್ದ ಉಸಿರು, ಆ ಉಸಿರಿನಿಂದ ಹೊರಹೊಮ್ಮುತ್ತಿದ್ದ ಬೆಂಕಿನ ಕಿಡಿಗಳು ಇತ್ಯಾದಿ ಸುಂದರ ಚಿತ್ರಣವನ್ನು ಕೊಡುವ ಮೂಲಕ ಪಂಪ ಬಾಹುಬಲಿಯ ತಪಸ್ಸಿನ ತೀವ್ರತೆಯನ್ನು ಸಚಿತ್ರವಾಗಿ ಪರಿಚಯಿಸುತ್ತಾನೆ. ಪಂಪನ ಈ ದೃಶ್ಯಕ್ಕೆ ರತ್ನಾಕರ ಚಿತ್ತವಿದು.

ಮುಚ್ಚಿದ ಕಣ್ಣು ಮುಚ್ಚಿದ ತುಟಿ ಬಿಟ್ಟ ತೋ
ಳೊಚ್ಚ ತಾಗಿರೆ ನಡೆವುಸುರು।
ಸಚ್ಚಿದಾತ್ಮನ ನೋಡುತ್ತೈದಾನೆ ಲೋಕವೆ
ಲ್ಲಚ್ಚರಿ ಪಟ್ಟು ನೋಡುತ್ತಿದೆ॥
ಹುತ್ತವೆದ್ದುವು ಬಳ್ಳಿ ಮೈಗೆ ಹಬ್ಬಿದವು ಹಾ
ವತ್ತಿತ್ತ ಹರಿದುವಂಗದೊಳು।
ಚಿತ್ತಕಂಪಿಸದೆ ನಿಂದಿಹನೆ ಯೋಗದ ಕಲ್ಲ
ಪುತ್ತಳಿಯಂತೆ ಯೋಗೀಂದ್ರ॥

ಹೀಗೆ ಒಂದು ವರ್ಷ ಮಂದರಗಿರಿಯಂತೆ ನಿಂತಿದ್ದ ಬಾಹುಬಲಿಯ ತಪಸ್ಸಿಗೆ ಭರತನೇ ಆಶ್ಚರ್ಯಪಟ್ಟನೆಂಬುದು ರತ್ನಾಕರನ ಅಭಿಪ್ರಾಯ.

ಕಷಾಯಗಳು ಮನಸ್ಸನ್ನು ಕೆಡಿಸುವ ಮಾಧ್ಯಮಗಳು, ಅವುಗಳನ್ನು ನಿವಾರಿಸ-ಬೇಕಾದರೆ ದೃಢಚಿತ್ತ ಬೇಕು. ಮೈಯನ್ನು ಬೆತ್ತಲೆ ಮಾಡಿಕೊಂಡರೆ ಸಾಲದು

ಮನಸ್ಸನ್ನು ಬೆತ್ತಲು ಮಾಡಿಕೊಳ್ಳಬೇಕು ಎಂದು ಭರತ ಬಾಹುಬಲಿಗೆ ಹೇಳುವ ಮಾತುಗಳು ಬಾಹುಬಲಿಯ ಕಷಾಯವನ್ನು ಕರಗಿಸಿ ನಿಧಾನವಾಗಿ ದಿವ್ಯತೆಯ ಬೆಳಕು ಮೂಡಲವಕಾಶ ಮಾಡಿಕೊಡುತ್ತದೆ. ಈ ಚಿತ್ರಣ ಪಂಪನಲ್ಲಿಲ್ಲ.

ಕಾವ್ಯ ಬರೆಯುತ್ತಿರುವುದೇ ರತ್ನಾಕರ ಸಾಮಾನ್ಯರಿಗಾದ್ದರಿಂದ ಹೀಗೆ ಹೇಳಿದ್ದಾನೆ. ಬಾಹುಬಲಿಗಿದ್ದ ಮನಃಕಷಾಯವನ್ನು ಕುರಿತು ಪಂಪ ರತ್ನಾಕರರಿಬ್ಬರೂ ವಿವೇಚಿಸಿದ್ದಾರೆ. ಪಂಪನಲ್ಲಿ 'ನೆಲದ ಪ್ರಸಕ್ತಿ' ಮನಃಕಷಾಯಕ್ಕೆ ಮೂಲ ಕಾರಣವಾದರೆ, ರತ್ನಾಕರನಲ್ಲಿ 'ಸೈನಿಕರ ಮೂದಲಿಕೆ' ಮೂಲ ಕಾರಣವಾಗಿ ತರುವಾಯ ನೆಲದ ಪ್ರಸಕ್ತಿಯ ವಿಚಾರ ಬರುತ್ತದೆ. ಇವರಿಬ್ಬರ ದೃಷ್ಟಿಕೋನದ ಭಿನ್ನತೆ ಕಂಡುಬರುತ್ತದೆ. ಪಂಪನಲ್ಲಿ ಭೂಮಿ ಪ್ರಧಾನವಾಗಿದ್ದರೆ, ರತ್ನಾಕರನಲ್ಲಿ ಬಾಹುಬಲಿಯ ದುಡುಕು ನಡವಳಿಕೆ ಮುಖ್ಯವಾಗಿದೆ. ಇವೇ ಮನಃಕಷಾಯವನ್ನು ಬಾಹುಬಲಿಯಲ್ಲಿ ಹುಟ್ಟಿಸುತ್ತವೆ. ಹೀಗಾಗಿ ಸ್ವರೂಪದಲ್ಲಿ ನಿರ್ವಹಣೆ ಬೇರೆಯಾಗಿದ್ದರೂ ಪರಿಣಾಮದಲ್ಲಿ ಬಾಹುಬಲಿಯ ಮುಕ್ತಿಯನ್ನು ಇಬ್ಬರು ಕವಿಗಳು ಸಾಧಿಸುತ್ತಾರೆ.

ಪಂಪನ ಬಾಹುಬಲಿಗೆ ತಾನು ಭರತನ ಹಂಗಿನ ನೆಲದಲ್ಲಿದ್ದೇನೆಂದು ಭಾವನೆ ಬಲಿತು ಕಷಾಯಕ್ಕೆ ಆಸ್ಪದ ಕೊಟ್ಟಿದೆ. ಈ ವಿಷಯವನ್ನು ಭರತ ತನ್ನ ತಂದೆಯಿಂದ ತಿಳಿದುಕೊಂಡು ನೀನು ನನ್ನ ನೆಲದಲ್ಲಿದ್ದೀಯ, ನೀನು ಕೊಟ್ಟಿದ್ದರಿಂದ ಅದು ನನಗೆ ಬಂದಿತು ಎಂದು ಹೇಳಿದನು. ಆಗ ಅವನಿಗೆ ಕೇವಲ ಜ್ಞಾನ ಪ್ರಾಪ್ತಿಯಾಗುತ್ತದೆ.

ರತ್ನಾಕರನು ಅಷ್ಟೊಂದು ಸುಲಭದಲ್ಲಿ ಸಂದರ್ಭವನ್ನು ಮುಕ್ತಾಯಗೊಳಿಸು-ವುದಿಲ್ಲ. ಅವನಲ್ಲಿ ಸೈನಿಕರ ಮೂದಲಿಕೆಯ ಪ್ರಸ್ತಾಪ ಬರುತ್ತದೆ. ಸೈನಿಕರ ಮೂದಲಿಕೆಗೆ ಮೊದಲ ಪ್ರಾಶಸ್ತ್ಯಕೊಟ್ಟಿದ್ದರೂ ಆ ಚುಚ್ಚು ನುಡಿಯ ಪರಿಣಾಮವಾಗಿ ಬಾಹುಬಲಿ ಮನಃಕ್ಲೇಷಕ್ಕೊಳಗಾದನೆಂದು ಹೇಳಿದ್ದರ ಹಿಂದೆ ದೊಡ್ಡವರ ಸಣ್ಣ ಮನಸ್ಸು ಸೂಚಿತವಾಗುತ್ತದೆ. ಇದು ಜನಪದ ನಿಲುವೇ ಆಗಿರುತ್ತದೆ. ಬಾಹುಬಲಿಯನ್ನು ಗುರುವೆಂದು ಭರತ ಗೌರವಿಸುವಲ್ಲಿ ರತ್ನಾಕರನ ತಿಳಿವಳಿಕೆಯ ಎಚ್ಚರ ಮೆಚ್ಚು-ವಂತಾದ್ದಾಗಿದೆ. ಮುಂದೆ ಬಾಹುಬಲಿಗೆ ಕೇವಲಜ್ಞಾನ ಪ್ರಾಪ್ತಿಯಾಗುವುದು ಅವನ ಸಾಧನೆ. ಸಿದ್ಧಸ್ಥಿತಿಯ ವಿಚಾರ ಯಾವುದೇ ವ್ಯತ್ಯಾಸವಿಲ್ಲದೆ ಪಂಪ ರತ್ನಾಕರರಲ್ಲಿ ಮೂಡಿದೆ.

ಬಾಹುಬಲಿ ಕೇವಲ ಜ್ಞಾನಿಯಾಗುವಾಗ ಭರತನು ಪ್ರಥಮ ಚಕ್ರವರ್ತಿಯೆಂದು ಪ್ರಸಿದ್ಧನಾಗುವುದು ಸಕಲ ಸಂಪತ್ತನ್ನು ಬಹುದೀರ್ಘಕಾಲ ಅನುಭವಿಸುವುದು ಇತ್ಯಾದಿ ಸಂಗತಿಗಳಿಂದ ಪ್ರಾರಂಭವಾಗಿ ಮುಂದೆ ಭರತ ಮುನಿಶ್ರೇಷ್ಠನಾಗಿ ಮೋಕ್ಷವನ್ನು

ಪಡೆಯುವುದು ಇಷ್ಟು ವಿಚಾರಗಳನ್ನು ಪಂಪ ಒಂದರ ಹಿಂದೆ ಒಂದರಂತೆ ಪೋಣಿಸುತ್ತಾ ಹೋಗುತ್ತಾನೆ. ಇಲ್ಲೆಲ್ಲಿಯೂ ಭರತನ ಮಾನಸಿಕ ಒಳತೋಟಿಯನ್ನು ಪಂಪ ಹೇಳುವುದಿಲ್ಲ. ರತ್ನಾಕರನಿಗೆ ಧರ್ಮದ ತಿಳಿವಳಿಕೆಯನ್ನು ಅತ್ಯಂತ ಸರಳವಾಗಿ ಹೇಳುವ ಅಭಿಲಾಷೆಯು ಇರುವುದರಿಂದ ನಿರಾಳವಾಗಿ ಸಂಧಿ ಸಂಧಿಗಳಾಗಿ ವಿಭಾಗಿಸಿಕೊಂಡು ಎಷ್ಟು ಸಾಧ್ಯವೋ ಅಷ್ಟು ಜಾನಪದ ನೆಲೆಯಲ್ಲಿ ವ್ಯಕ್ತಪಡಿಸುತ್ತಾ ಹೋಗುತ್ತಾನೆ. ಪಂಪ ಬಿಂದುವಿನಂತೆ ಹೇಳಿರುವುದನ್ನು ಇವನು ವಿಸ್ತರಿಸುತ್ತಾನೆ.

ಉದಾಹರಣೆಗೆ: ಸ್ವಯಂವರ ಸಂಧಿ, ಲಕ್ಷ್ಮೀಮತಿಯುದ್ವಾಹಸಂಧಿ, ನಾಗರ ಸಲ್ಲಾಪಸಂಧಿ ಇತ್ಯಾದಿ.

ರತ್ನಾಕರನು ಭರತನು ಜಿನವಾಸಗಳನ್ನು ನಿರ್ಮಿಸಿದ ವಿಚಾರವನ್ನು ಪಂಪ-ನಂತೆಯೇ ಹೇಳುತ್ತಾನೆ. ಪಂಪ ಒಂದು ಮಾತಿನಲ್ಲಿ ಹೇಳಿದ್ದನ್ನು ರತ್ನಾಕರ ಜಾಣ್ಮೆ-ಯಿಂದ ಸೂಕ್ತ ರೀತಿಯಲ್ಲಿ ವಿಸ್ತರಿಸುತ್ತಾನೆ. ಏಕೆಂದರೆ ಪಂಪ ಷೋಡಶ ಸ್ವಪ್ನಗಳನ್ನು ಭರತ ಕಂಡನೆಂದು ಹೇಳಿ ಆ ಸ್ವಪ್ನಗಳ ವಿವರಗಳ ಪಟ್ಟಿಯನ್ನು ಸಾಂಪ್ರದಾಯಿಕತೆಯ ಹೊರತಾಗಿಯೂ ಅತ್ಯಂತ ಸರಳೀಕರಿಸಿ, ಅದಕ್ಕೊಂದು ಧಾರ್ಮಿಕ ಸ್ಪರ್ಶವನ್ನು ಕೊಡುತ್ತಾನೆ. ರತ್ನಾಕರ ಜಿನವಾಸ ನಿರ್ಮಿತಿಯ ವಿಚಾರವೂ ಅಷ್ಟೇ. ಭರತನೊಬ್ಬನ ಅಪೇಕ್ಷೆಯೇ ಆಗಿದ್ದರೂ, ಇಡೀ ಅರಮನೆಯ ಮಂದಿಯೇ ನೆರೆದಿದ್ದರೆಂಬ ರೂಪ-ಕೊಟ್ಟು ಅದಕ್ಕೆ ಕೌಟುಂಬಿಕದ ಸಡಗರ ಸಂಭ್ರಮದ ಆವರಣವನ್ನು ಸೃಷ್ಟಿಸುತ್ತಾನೆ. ಇದು ರತ್ನಾಕರನ ಕಾಲದ ಜನಜೀವನದ ಪರಿಚಯದ ಜೊತೆಗೆ ಅರಮನೆಯ ಪರಿಸರವನ್ನು ಪರಿಚಯಿಸುತ್ತದೆ. ಅತ್ತೆ-ಸೊಸೆ, ಅತ್ತಿಗೆ-ನಾದಿನಿ, ಮಾವ-ಸೊಸೆ, ಸವತಿ-ಸವತಿಯವರ ಅನ್ಯೋನ್ಯತೆಯನ್ನು ಅಣ್ಣ-ತಂಗಿಯರ ವಾತ್ಸಲ್ಯದ ಗಾಢ ಸಂಬಂಧವನ್ನು ರತ್ನಾಕರ ಅಚ್ಚುಕಟ್ಟಾಗಿ ಸೆರೆ ಹಿಡಿದಿದ್ದಾನೆ. ಅದೇ ಸನ್ನಿವೇಶದಲ್ಲಿ ಸಂಸಾರದ ಬಗ್ಗೆ ಆ ಕಾಲದ ಜನರಲ್ಲಿದ್ದ ಜವಾಬ್ದಾರಿಯ ಅರಿವನ್ನು ಮೂಡಿಸುತ್ತಾನೆ ಕವಿ.

ರತ್ನಾಕರ ಭರತನ ವ್ಯಕ್ತಿತ್ವವನ್ನು ನಿಜವಾಗಿ ಕಡೆದಿರುವುದು ಕುಮಾರರ ಯೋಗ ಸಂದರ್ಭದಲ್ಲಿ. ಆದರೆ ಜನನ ವಿಯೋಗದಲ್ಲಾಗಲಿ ಕುಮಾರರ ವಿಯೋಗದಲ್ಲಾಗಲೀ, ತಂದೆಯ ಪರಿನಿಷ್ಕ್ರಮಣದಲ್ಲಾಗಲೀ ಭರತ ಸಾಮಾನ್ಯ ಮಾನವನಂತೆ ದುಃಖಿಸುತ್ತಾನೆ. ಸಂಕಟಪಡುತ್ತಾನೆ. ಎಲ್ಲರನ್ನೂ ಕಳೆದುಕೊಂಡು ತಾನೊಬ್ಬನೇ ಇರಬೇಕಾದ ದುಃಸ್ಥಿತಿ-ಯನ್ನು ಹಳಿದುಕೊಂಡು ಮಾನಸಿಕವಾಗಿ ವಿಲವಿಲನೆ ಒದ್ದಾಡುವುದನ್ನು ನೋಡಿದರೆ

ಸಹೃದಯರ ಕಣ್ಣು ತೇವವಾಗುತ್ತದೆ. ಭರತ ಎಂಥ ಮಾನವೀಯ ವ್ಯಕ್ತಿ ಎಂಬುದು ಅರ್ಥವಾಗುತ್ತದೆ. ಇವುಗಳಲ್ಲಿ ಮುಖ್ಯ ಸನ್ನಿವೇಶ ಕುಮಾರವಿಯೋಗ.

ಮೇಘೇಶನ ದೀಕ್ಷೆ ನೂರು ಕುಮಾರರ ಮೇಲೆ ಊಹಿಸಲಾಗದ ಪರಿಣಾಮವನ್ನೇ ಬೀರುತ್ತದೆ. ತಕ್ಷಣ ಎಲ್ಲರೂ ಒಟ್ಟಾರೆ ಒಂದು ನಿರ್ಣಯಕ್ಕೆ ಬಂದೇ ಬಿಡುತ್ತಾರೆ. ನಮಗೆ ಆಶ್ಚರ್ಯವಾಗುತ್ತದೆ. ವಿಪರೀತ ಎನ್ನಿಸುತ್ತದೆ. ಆದರೂ ಸತ್ಯ. ಇದಕ್ಕೇನು ಕಾರಣ? ಗೊತ್ತಾಗುವುದಿಲ್ಲ. ತಂದೆ ಸ್ತ್ರೀಲೋಲುಪತೆ ಕಾರಣ ಎನ್ನೋಣವೇ? ಅಥವಾ ಭವದ ಕರ್ಮಕ್ಷಯ ಎನ್ನೋಣವೇ? ಅರ್ಥವಾಗುವುದಿಲ್ಲ. ಆದರೆ ಕವಿಯು ಕೊಡುವ ಕಾರಣ ಮಾತ್ರ ಭೋಗದ ಬಗ್ಗೆ ಆ ಮಕ್ಕಳಿಗಿದ್ದ ನಿರಸನವನ್ನು ಪ್ರತಿಬಿಂಬಿಸುತ್ತದೆ. ಒಂದರ್ಥದಲ್ಲಿ ಲೀಲಾವಿನೋದ ವಿಹಾರ. ಗೊತ್ತಿದ್ದು ಗೊತ್ತಿಲ್ಲದಂತೆ ನಿಜದಲ್ಲಿ ಹುಸಿಯನ್ನು ಹುಸಿಯಲ್ಲಿ ಸತ್ಯವನ್ನು ಅಡಗಿಸಿಡುವ ಚತುರ ಆದ್ದರಿಂದ ಆತನ ಬದುಕು ಆತನಿಗೇ 'ಸ್ವಪ್ನ'ವಾಗಿ ಕಾಣುತ್ತದೆ. "ಭವದಲ್ಲಿ ಬಾಳ್ವುದೆಲ್ಲವು ಸ್ವಪ್ನ" ಎಂಬುದೇ ಅವನ ದೃಢ ನಿರ್ಧಾರ; ನಂಬಿಕೆ. ರತ್ನಾಕರ ಜಿನಪೂಜೆಯನ್ನು ಹೇಗೆ ಜನರು ಕ್ರಮಬದ್ಧವಾಗಿ ಮಾಡುತ್ತಾರೆಂಬುದು ಸಚಿತ್ರ ವಿವರ ಕೊಡುತ್ತಾನೆ.

ಇಂಥ ಆದಿನಾಥ ಮುಗಿಲೊಡ್ಡು ಬಯಲಾದ ರೀತಿಯಲ್ಲಿ ಮುಕ್ತಿಪಥವನ್ನು ಪಡೆಯುತ್ತಾನೆ. ಭರತನಿಗೆ ದುಃಖ ಉಮ್ಮಳಿಸುತ್ತದೆ. ಮೂರ್ಛೆ ಹೋಗುತ್ತಾನೆ. ತಂದೆಯ ದೀಕ್ಷೆಯೊಂದಿಗೆ ಭರತನ ಲೌಕಿಕ ನಂಟು ಹೆಚ್ಚು ಕಡಿಮೆ ಕಡಿದು ಹೋಗುತ್ತದೆ. ಅದೇ ಸಮಯದಲ್ಲಿ ನಮವಿಮಿಯರು ದೀಕ್ಷೆ ಸ್ವೀಕರಿಸಿದ ಸುದ್ಧಿಯನ್ನು ಕೇಳುತ್ತಾನೆ. ಭರತ ತಕ್ಷಣ ಮಾನಸಿಕವಾಗಿ ನಿರ್ವೇಗಗೊಂಡರೂ ರಾಜನಾಗಿ ಮಾಡಬೇಕಾದ ಅಳಿದುಳಿದ ಕರ್ತವ್ಯವನ್ನು ಮುಗಿಸುತ್ತಾನೆ. ಎಂಥ ದುಃಖದಲ್ಲೂ ಪ್ರಜೋನ್ನತಿಯನ್ನು ಬಯಸುತ್ತಿದ್ದ ಭರತನೆಂಬುದು ಇದರಿಂದ ಧ್ವನಿತವಾಗುತ್ತದೆ.

ಪಂಪ ರತ್ನಾಕರರಿಬ್ಬರೂ ಕೆನ್ನೆಯಲ್ಲಿ ನೆರೆಗೂದಲನ್ನು ಕಂಡ ಭರತ ನಿರ್ವೇಗಪರನಾದ ಎನ್ನುತ್ತಾರೆ. ಆದಿರಾಜನಿಗೆ ಭರತ ಯುವರಾಜ ಪಟ್ಟ ಕಟ್ಟಿ ನೂರು ಮಕ್ಕಳಿಂದಾದ ನೋವನ್ನು ಮರೆಯದೇ ಇದ್ದ ಭರತ ತಕ್ಷಣ ಅರ್ಕಕೀರ್ತಿಗೆ ಪಟ್ಟು ಕಟ್ಟುತ್ತಾನೆ. ಅರ್ಕಕಿರ್ತಿಗೆ ಪಟ್ಟ ಕಟ್ಟುತ್ತಾನೆ. ಅರ್ಕಕೀರ್ತಿ ಬಡಪಟ್ಟಿಗೆ ಒಪ್ಪುವುದಿಲ್ಲ. ಜಾಣ್ಮೆಯಹಿಂದ ಪುತ್ರವಾತ್ಸಲ್ಯದ ಬಂಧನದ ಸಿಕ್ಕನ್ನು ಬಿಡಿಸಿಕೊಳ್ಳುತ್ತಾನೆ. ತಪೋವನಕ್ಕೆ ತೆರಳುತ್ತಾನೆ. ಜನರು "ಸಿರಿಯೆ ಕಾಮನಬಿಲ್ಲರಯ್ಯವೋಲ್ತೋರಿ ಜಾರುವೆಯೆ" ಎಂದು

ತಮ್ಮಡೆಯನ ಬಗ್ಗೆ ಪ್ರೀತಿಯಿಂದ ಆಕ್ಷೇಪಿಸುತ್ತಾರೆ. 'ಹೋದರೆ ನಮ್ಮ ಸಂಪತ್ತು" ಎಂದು ದುಃಖಿಸುತ್ತಾರೆ.

ಭರತ ಮುಕ್ತಿಗೆ ಸಂದ ಎಂದಷ್ಟೇ ಪಂಪ ಹೇಳಿದ್ದರೆ ರತ್ನಾಕರ ಅವನು ಹೇಗೆ ಆಗು ಮಾಡುತ್ತಾನೆಂಬುದನ್ನು ಮತ್ತಷ್ಟು ಶುಚಿಕರವಾಗಿ ವಿಸ್ತರಿಸುತ್ತಾನೆ. ಗುರುವಿಲ್ಲವೆಂದು "ತನಗೆ ತಾನೇ ಗುರು" ವೆಂದು ಘೋಷಿಸಿಕೊಂಡ ಭರತ, ಬದುಕಿನ ಸುಖೀದಾಂಪತ್ಯದಂತೆ ಆಧ್ಯಾತ್ಮವನ್ನು ಸರಾಗವಾಗಿ ದಾಟುತ್ತಾನೆ. "ಎರಡಳಿದೊಂದಾಗಿ ನಿರ್ವಿಕಲ್ಪದೊಳು ಭಾಸುರಯೋಗಿ" ತನ್ನೊಳನನ್ನು.

ಸಂಸಾರದ ನಿರಂತರತೆಯೇ ಹೀಗೆ. ಚಕ್ರದುರಳಾಟದಂತೆ ಭವಭಾವಾಂತರ ಸುತ್ತು. ಇದರಿಂದ ಪಾರಾಗಲು ಆ ಕುಮಾರರು ಜಿನಸಭೆಗೆ ತೆರಳಿ ಸ್ವಾಮಿಯ ಪೂಜೆಗೆ ಶುಚಿರ್ಭೂತರಾಗಿ ದೀಕ್ಷೆಗೆ ಸನ್ನದ್ಧರಾಗುತ್ತಾರೆ. ಅವರಿಗೆ ದೀಕ್ಷೆಯ ಮಹತ್ವವೂ ಗೊತ್ತಿದೆ. "ಮೋಕ್ಷಕ್ಕೆ ಕಾರಣ ಧ್ಯಾನ, ಅದಕ್ಕೆ ಬಾಹ್ಯರಕ್ಷೆ ಜಿನದೀಕ್ಷೆ" ಅದಕ್ಕಾಗಿ ಸ್ವಯಂ ಸಿದ್ಧರಾಗುತ್ತಾರೆ. ಒದ್ದೆ ಬಟ್ಟೆ, ಹಾಕಿದ್ದ ಹಾರ, ಕಿವಿಯಾಭರಣ, ಕೇಶಪಾಶ, ಆಶಾಪಾಶ ಎಲ್ಲವನ್ನೂ ಏಕಕಾಲದಲ್ಲಿ ತಂದು ಬಿಸಾಡುತ್ತಾರೆ. ಜೈನ ಸಂಪ್ರದಾಯದಂತೆ ಸ್ವಸ್ತಿಕ ಸ್ವರೂಪದಲ್ಲಿ ಎಲ್ಲರಿಗೂ ಸ್ವಾಮಿಯ ಪಾದಕ್ಕೆ ನಮಸ್ಕರಿಸುತ್ತಾರೆ: ದೀಕ್ಷಿತರಾಗುತ್ತಾರೆ.

ಇತ್ತ ನೂರು ಮಕ್ಕಳು ದೀಕ್ಷೆ ಪಡೆದ ವಿಚಾರ ಭರತನಿಗೆ ಗೊತ್ತಾಗುವುದು ಊಳಿಗದವರ ಮೂಲಕ; ಅವನಿಗೆ ಹೇಗಾಗಿರಬೇಡ! ಕವಿ ಹೀಗೆ ಹೇಳುತ್ತಾನೆ; "ವೀಳೆಯದೆಲೆ ಹಸ್ತದಿಂ ಬಿದ್ದುಪಿಡಿಯಲ್ಲಿ ಬಾಳ ಬೀಸಿದ ತೆರೆನಾಯ್ತು" ವೀಳೆಯದೆಲೆ ಶುಭದ ಸಂಕೇತ. ಅದು ಅಪಶಕುನವಾಯ್ತು. ಎದೆಗೆ ಕತ್ತಿ ಚುಚ್ಚಿದ ಮೇಲೆ ಜೀವ ಉಳಿಯುವುದಾದರೂ ಹೇಗೆ? ಹಾಗಾಯ್ತು ಭರತನ ಪರಿಸ್ಥಿತಿ. ಅವನ ಅಂತರಂಗದ ಅಳಲಿನ ತೀವ್ರತೆಯನ್ನು ರತ್ನಾಕರ ಸರಳ ಮಾತಿನಲ್ಲಿ ಸಶಕ್ತವಾಗಿ ಚಿತ್ರಿಸಿದ್ದಾನೆ. ಇಲ್ಲಿಯವರೆಗೆ ಭರತನ ಭೋಗದ ಚಿತ್ರಣವನ್ನು ತೊಟ್ಟ ಕವಿ ಈಗ ತಂದೆಯಾದ ಭರತನ ಮನಸ್ಥಿತಿಯನ್ನು ಮನೋಜ್ಞವಾಗಿ, ಅತ್ಯಂತ ನೈಜವಾಗಿ ನಿರೂಪಿಸುತ್ತಾನೆ. ಮಕ್ಕಳು ದೀಕ್ಷೆಗೆ ಹೋದದ್ದನ್ನು ನೋಡಿ ಭರತ ಮೊದಲು ಹಲಬುತ್ತಾನೆ, ಒದ್ದಾಡುತ್ತಾನೆ, ವಿಷಾದಿಸುತ್ತಾನೆ, ನಂತರ ತನಗೆ ತಾನೇ ಸಮಾಧಾನಪಟ್ಟುಕೊಳ್ಳುತ್ತಾನೆ. ಮಕ್ಕಳ ತಾಯಂದಿರ ನೋವು ಹೇಳತೀರದಾಗುತ್ತದೆ. ಅವನು ತನ್ನ ಮಡದಿಯರನ್ನು ಸಮಾಧಾನ ಮಾಡುತ್ತಾನೆ. ಏಕೆಂದರೆ ಆ ಮುಂದಿನ ಭರತನ ನಡವಳಿಕೆ ನಿರ್ಧಾರಗಳು ಸಂಪೂರ್ಣವಾಗಿ ಧರ್ಮದ ತಾತ್ವಿಕತೆಯ ಕಡೆಗೆ ವಾಲುತ್ತದೆ. ಅದಕ್ಕೆ ಪೂರಕ-ವೆಂಬಂತೆ ಷೋಡಶ ಸ್ವಪ್ನಗಳನ್ನು ಭರತ ಕಾಣುವಂತಾಗುತ್ತದೆ.

ಷೋಡಶ ಸ್ವಪ್ನ ವಿಚಾರವನ್ನು ಪೂರ್ವಕ ವಿಗಳೆಲ್ಲರೂ ಹೇಳುತ್ತಾರೆ. ಜೈನ ಪುರಾಣ ಕಾವ್ಯಗಳಲ್ಲಿ ಈ ವಿಚಾರ ಸಾಮಾನ್ಯವಾಗಿ ಬಂದೆ ಬರುತ್ತದೆ. ಪ್ರತಿ ಸ್ವಪ್ನದ ವಿವರವನ್ನು ಒಂದೊಂದು ವಾಕ್ಯದಲ್ಲಿ ಅವುಗಳ ಗುಣಲಕ್ಷಣಗಳನ್ನು ಹೇಳುತ್ತಾನೆ. ಪಂಪನಷ್ಟು ವಿವರಗಳನ್ನು ರತ್ನಾಕರ ಕೊಡುವುದಿಲ್ಲ. ಬದಲಾಗಿ ಮುಖ್ಯವಾದವುಗಳಷ್ಟನ್ನೇ ಬಿಡದೆ ಸರಳೀಕರಣಗೊಳಿಸಿ ತಿಳಿಸುತ್ತಾನೆ. ರತ್ನಾಕರನ ಭರತನ ಬದುಕು ಶೋಧಿಸುತ್ತಾ ಹೋಗುವ ಪ್ರಕ್ರಿಯೆಯನ್ನು ಸಚಿತ್ರೀಕರಿಸುವ ರತ್ನಾಕರ ಭರತನು ಕರ್ಮಗಳನ್ನು ಪೂರ್ಣವಾಗಿ ಕ್ಷಮಿಸಿದುದು, ಧ್ಯಾನ ಸ್ಥಿತಿಯ ಔನ್ನತ್ಯವನ್ನು ಸಾಧಿಸಿದ್ದು, "ತನ್ನನ್ನು ತಾನೇ ತನ್ನಲ್ಲಿ ನೋಡಿ ತನುವಳಿದ" ಪರಿಯನ್ನು ವಿವರಣಾತ್ಮಕವಾಗಿ ಕೊಡುತ್ತಾನೆ. ಆ ಮೂಲಕ ಮೋಕ್ಷಗಾಮಿ ಚೇತನವೊಂದರ ಚಲನೆಯನ್ನು ಸಾಮಾನ್ಯವಾಗಿ ದರ್ಶಿಸುವಂತೆ ಮಾಡುತ್ತಾನೆ.

## ಅಧ್ಯಾಯ – ೫

# ಪಂಪ ಮತ್ತು ರತ್ನಾಕರವರ್ಣಿಯಲ್ಲಿ ಯುಗಧರ್ಮದ ಅಭಿವ್ಯಕ್ತಿ

ಪಂಪನ ಕಾಲದ ಯುಗಧರ್ಮ ಪ್ರಧಾನವಾಗಿ ಕ್ಷಾತ್ರ, ಪ್ರಧಾನವಾದ ವೀರಯುಗ. ಪಂಪನ ಕಾವ್ಯಗಳನ್ನಾಗಲೀ, ಅವನ ಸಮಕಾಲೀನ ಕವಿಗಳ ಕಾವ್ಯಗಳನ್ನೂ ಓದಿದಾಗ ವೀರಜೀವನ ಎದ್ದು ಕಾಣುತ್ತದೆ. ಆ ಕಾಲದಲ್ಲಿ ಹೋರಾಡಿ ಮಡಿದ ವೀರರನ್ನು ಕುರಿತು ನೂರಾರು ವೀರಶಾಸನಗಳೂ ಇವೆ.

ಕ್ರಿ.ಶ. ೯೬೬–೬೭ರ ಒಂದು ಶಾಸನದಲ್ಲಿ ಬರೆದ "ವೀರನ ಸಾವು ಕಥೆಯಾಗಿ ಪರೆದುದು ಮೂಱುವೀ ಲೋಕದೊಳಗಿಲ್ಲ" ಎಂಬ ಒಂದು ವಾಕ್ಯ ಆ ಕಾಲದ ಒಂದು ಸಂಗತಿಯನ್ನು ಚೆನ್ನಾಗಿ ಪ್ರತಿಧ್ವನಿಸುತ್ತದೆ. ಯುದ್ಧದಲ್ಲಿ ವೀರರು ಸತ್ತರೆ ಅವರ ಬಗ್ಗೆ ಅನೇಕ ಹಾಡು–ಕಥೆಗಳು ಹುಟ್ಟಿ ಹಬ್ಬುತ್ತಿದ್ದವು. ವೀರ ಜಗನ್ಮಾನ್ಯವಾಗುತ್ತಿದ್ದ ತನ್ನ ಯಜಮಾನನಿಗಾಗಿ ಯುದ್ಧದಲ್ಲಿ ಹೋರಾಡುವ ಮುನ್ನವೇ 'ತನ್ನ ಸಾವಂ ನಿಶ್ಚಿಯಿಸಿದ' ಬೋಯಿಗನಂತಹ (ಕ್ರಿ.ಶ.೯೪೦) ತನ್ನ ಮೈತುಂಬ ಬಾಣ ಚುಚ್ಚಿದರೂ 'ಕಣೆಪಂಜುರದೊಳ್ ಎರಗಿ ಭೀಷ್ಮನ್ ವಿಟ್ಟಂತೆ ನೆಲಮಟ್ಟದೆ' ಇದ್ದ ಕುಲಮುದ್ದನಂತಹ (ಸುಮಾರು ಕ್ರಿ.ಶ.೮೦೦) ಅನೇಕ ವೀರರನ್ನು ಶಾಸನದಲ್ಲಿ ಕಾಣುತ್ತೇವೆ. ಇನ್ನೊಂದು ವಿಷಯವೆಂದರೆ ಪಂಪನ ಕಾಲದಲ್ಲಿ ಜನಮನವನ್ನು ವಿಶೇಷವಾಗಿ ಗೆದ್ದಂತಹ ಮೂರನೆಯ ಗೋವಿಂದ, ಶಂಕರಗಂಡ, ಬದ್ದೆಗ, ನರಸಿಂಹ, ಅರಿಕೇಸರಿ(೨), ಕೃಷ್ಣ (೩) ಚಾವುಂಡರಾಯ ಇವರೆಲ್ಲರೂ ಶೂರರು. ಸ್ತ್ರೀಯರೂ ಯಾವಾಗಲೂ ಒಡವೆ ವಸ್ತ್ರಗಳನ್ನು ಬಯಸುವುದಿಲ್ಲ. ಅದಕ್ಕೆ ಬದಲಾಗಿ ವೀರರ ಮೈಮೇಲಿನ ಗಾಯಗಳನ್ನು ಹೆಚ್ಚು ಮೆಚ್ಚಿಕೊಳ್ಳುತ್ತಾರೆ ಎಂಬ ರನ್ನನ ಉಕ್ತಿ ಆ ಕಾಲದ ಜನರ ಮನೋಭಾವವನ್ನು ಚೆನ್ನಾಗಿ ಪ್ರತಿನಿಧಿಸುತ್ತದೆ. ರನ್ನನಲ್ಲಿ ಈ ಮಾತಿದೆ.

ತುಱುಗೋಳೋಳ್ ಪೆಣ್ಬುಯ್ಯಲೊ।
ಳೆಟಿವೆಸದೊಳ್ ನಂಟನೆಡಱಿೊಳೂರಟೆನೊಳಂ।
ತ ಟಿಸಂದು ಗಂಡುತನಮನೆ।
ನೆಱಿಪದವಂ ಗಂಡನಲ್ಲನೆಂತುಂ ಷಂಡಂ॥

ಅಂದರೆ ಯಾವನು ಸಾಹಸದ ಪ್ರಸಂಗ ಬಂದಾಗ ಹೇಡಿಯಂತೆ ಹಿಂಜರಿಯುತ್ತಾನೆಯೋ ಅವನು ಸಮಾಜದಲ್ಲಿ ಅತ್ಯಂತ ತಿರಸ್ಕೃತ ವ್ಯಕ್ತಿಯಾಗುತ್ತಿದ್ದ. ಆ ಕಾಲದ ಮುಖ್ಯ ಮೌಲ್ಯಗಳಲ್ಲಿ ವೀರ, ತ್ಯಾಗಗಳಲಾಗಿ (ಬೀರ, ಚಾಗ, ಇಱಿವುದು,

ಈವುದು) ಹಿರಿಯ ಸ್ಥಾನವಿತ್ತು. ಹೀಗೆ ಪಂಪನ ಕಾಲ ವೀರರಸ ಪ್ರಧಾನವಾದದ್ದೆಂದು ಹೇಳಬಹುದಾಗಿದೆ.. ಪಂಪನ ಕಾಲದಲ್ಲಿ ರಾಜರ ಮಧ್ಯೆ ಹೋರಾಟ ನಡೆಯುತ್ತಿತ್ತು. ಅಂತಹ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದ ವೀರರು ಜನರ ಆಕರ್ಷಣೆಯನ್ನು ಸೆಳೆದಿದ್ದರು.

ಪಂಪನ ಕಾಲದ ಯುಗಧರ್ಮ ಮುದ್ರೆ ಹೊತ್ತು ನಿಂತಿರುವುದು ಆದಿಪುರಾಣ-ಕ್ಕಿಂತ ಹೆಚ್ಚಾಗಿ ಪಂಪಭಾರತದಲ್ಲಿ. ಏಕೆಂದರೆ ಅದೊಂದು ವೀರಕಾವ್ಯ. ಪಂಪನ ಆಶ್ರಯದಾತನಾದ ಅರಿಕೇಸರಿಯು ಒಬ್ಬ ಸಾಮಂತ ದೊರೆ. ಆದ್ದರಿಂದ ಅನೇಕ ಯುದ್ಧಗಳಲ್ಲಿಪಂಪನು ಭಾಗವಹಿಸಿ ಕಲಿಯೂ ಆಗಿದ್ದನು. ಪಂಪನ ಕ್ಷಾತ್ರದ ವಾತಾವರಣದಲ್ಲಿದ್ದು ಕಾರಣ ಅವನ ಸ್ವಭಾವ ಕ್ಷಾತ್ರದಾಗಿ, ಅವನ ಕೃತಿಯ ವಸ್ತುವೂ ವೀರನಾಗಿದ್ದರೆ ಅದು ವೀರಕಾವ್ಯವಾಗುತ್ತದೆ ಎಂದು ಹೇಳಬಹುದು.

ಪಂಪನು ತನ್ನ ಕಥಾನಾಯಕನಾದ ಅರ್ಜುನನ ಜೊತೆ ಅರಿಕೇಸರಿಯನ್ನು ಸಮೀಕರೀಸಿದ್ದಾನೆ. ಅರ್ಜುನ ಒಬ್ಬ ಶೌರ್ಯವಂತ. ಜೊತೆಗೆ ಅಷ್ಟೇ ಪ್ರಮಾಣದ ಅಭಿಮಾನ. ಅರಿಕೇಸರಿಯಲ್ಲುಂಟು. ಪಂಪ ತನ್ನ ಕೃತಿಯಲ್ಲಿ ತನ್ನ ಕಾಲದ ಲಕ್ಷಣ ಕೀರ್ತಿಯ ಬಗ್ಗೆ ತೀರದ ಹಸಿವು. 'ಜಪ'ದ ಬಗ್ಗೆ ಇದ್ದ ಕಾಳಜಿ ಒಂದು ಮುಖವಾದರೆ, 'ಪಟಿ' ಅಥವಾ ಅಪಕೀರ್ತಿಗೆ ಹೆದರುವುದು ಇನ್ನೊಂದು ಮುಖ. ಇನ್ನೊಂದು ಗುಣ ಸಾಕಿದ ಒಡೆಯನಲ್ಲಿ ಅಚಲವಾದ ಶ್ರದ್ಧೆ ಮತ್ತು ಅವನಿಗಾಗಿ ಪ್ರಾಣತ್ಯಾಗ ಮಾಡಲು ಸಿದ್ಧವಿದ್ದುದು. ಇದೇ 'ಜೋಳವಾಟಿ' ಮತ್ತು 'ಲೆಂಕವಾಟಿ'.

ಇಲ್ಲಿ ಕರ್ಣನ ಪಾತ್ರವನ್ನು ಅರ್ಜುನನ ಪಾತ್ರದ ಜೊತೆ ಹೋಲಿಸಿಬಹುದು. ಇಬ್ಬರೂ ವೀರರೇ; ಇಬ್ಬರಲ್ಲೂ ಛಲ ಉಂಟು, ಕೀರ್ತಿಯ ಬಯಕೆ ಉಂಟು. ಔದಾರ್ಯದಲ್ಲಿ ಅರ್ಜುನನಿಗಿಂತ ಕರ್ಣ ಒಂದು ಕೈ ಮಿಗಿಲು. ಸನ್ನಿವೇಶದ ಒತ್ತಡದಿಂದ ದುರ್ಯೋಧನನ ಲೆಂಕನಾಗಿ, ಅವನಿಗಾಗಿ ತನ್ನನ್ನು ತಾನು ಬಲಿಯಾಗಿ ಕೊಟ್ಟುಕೊಂಡ. ಆಧಿಕಾರ, ಐಶ್ವರ್ಯಕ್ಕೆ ಬಳಿ ಬೀಳದೆ ಸ್ವಾಮಿಭಕ್ತಿಯನ್ನು ಪ್ರಕಟಪಡಿಸಿದವನು ಕರ್ಣ. ಕರ್ಣನ ಪಾತ್ರದಲ್ಲಿ ತ್ಯಾಗ ಕಂಡುಬರುತ್ತದೆ.

ಛಲಕ್ಕೆ ಹೆಸರಾದವನು ದುರ್ಯೋಧನ. ಇದರ ಜೊತೆಗೆ ದೈರ್ಯನೂ ಅವನಲ್ಲಿದೆ. ಯುದ್ಧದ ಹಿಂದಿನ ದಿನ ಸೈನ್ಯಗಳ ಶಿಬಿರದಲ್ಲಿ ನಡೆಯುವ ಸೈನಿಕರ ವೀರಲಾಪ ಮತ್ತು ಪ್ರಣಯ ಸಂಭಾಷಣೆಗಳು ಪಂಪಭಾರತದ ಬಹು ಸ್ವಾರಸ್ಯ ಭಾಗಗಳಲ್ಲೊಂದು. ವೀರರ ಯುದ್ಧ ಕಾತುರ, ಸ್ವಾಮಿಭಕ್ತಿಯನ್ನು ಯುದ್ಧದಲ್ಲಿ ಪ್ರಕಟಿಸುವ ಹಂಬಲ, ತಮ್ಮ ಸ್ವಾಮಿಯಾಗಿ ತಮ್ಮ ಪ್ರಾಣವನ್ನು ಹುಲ್ಲಿಗಿಂತ ಕಡೆಯಾಗಿ ಪರಿಗಣಿಸುವುದು ಇವೆಲ್ಲದರ

ಚಕ್ರ ಮತ್ತು ಯುದ್ಧರಂಗಕ್ಕೆ ಕಳುಹಿಸುವ ಮತ್ತು ಸಾವಿನ ಸುದ್ದಿ ಕೇಳಿದೊಡನೆ ಸಹಗಮನ ಮಾಡಲು ಸಿದ್ಧರಾಗಿರುವ ಅವರ ಪ್ರೇಯಸಿಯರ ಚಿತ್ರವೂ ಪರಿಣಾಮಕಾರಿಯಾಗಿ ಮೂಡಿದೆ.

ಪಂಪಭಾರತಕ್ಕೆ ಅವನು ಆರಿಸಿಕೊಂಡ ವಸ್ತು ಹಳೆಯದಾದರೂ ಅದರ ಸತ್ವ ಸಮಕಾಲೀನವಾದುದು.

ಆಗಮಿಕ ಕಾವ್ಯಗಳಿಗಿಂತ ಲೌಕಿಕ ಕಾವ್ಯಗಳಲ್ಲಿ ಆಗಿನ ಕಾಲಧರ್ಮ ಹೆಚ್ಚು ಸ್ಪಷ್ಟವಾಗಿ ಪಡಿಮೂಡಿರುವುದನ್ನು ನೋಡಬಹುದು.

ಅವನ ಕಾಲದಲ್ಲಿ ಕುಲದ ಪ್ರಶ್ನೆ ಕಂಡುಬರುತ್ತದೆ. ಕರ್ಣನ ಪಾತ್ರದಲ್ಲಿ ಬಿಲ್ವಿದ್ಯಾ ಪ್ರದರ್ಶನದ ಸಂದರ್ಭದಲ್ಲಿ, ಪಟ್ಟಾಭಿಷೇಕದ ಸಂದರ್ಭದಲ್ಲಿ, ಸಾರಥ್ಯದಲ್ಲಿ ಕಂಡುಬರುತ್ತದೆ. ನಮ್ಮ ಸಾಮಾಜಿಕ ವ್ಯವಸ್ತೇಯಲ್ಲಿ ವ್ಯಕ್ತಿಯ ವ್ಯಕ್ತಿತ್ವವನ್ನು ಜಾತಿಯಿಂದ ಅಳೆಯುತ್ತ ಬಂದಿರುವುದನ್ನು ಮೇಲಿನ ಪರಸಂಗಗಳು ವಿಡಂಬಿಸುವಂತೆ ತೋರುತ್ತದೆ. ಅವನ ಸಮಾಜದಲ್ಲಿ ವೇಶ್ಯಾವಾಟಿಕೆಯ ವರ್ಣನೆ, ಬೇಟೆಯ ವರ್ಣನೆ, ಸೈನಿಕ, ಸೈನಿಕ ಕುಟುಂಬದ ವೀರ ಪ್ರವೃತ್ತಿಗಳು.

ಅರ್ಜುನನ್ನು ನಾಯಕನನ್ನಾಗಿ ಮಾಡಿಕೊಂಡಿದ್ದರೂ ಕರ್ಣ ಮತ್ತು ದುರ್ಯೋಧನರ ಪಾತ್ರದ ಬಗ್ಗೆ ಕವಿಗೆ ವಿಶ್ವಾಸ, ಗೌರಗಳಿವೆ. ಕರ್ಣನ ಪಾತ್ರದ ನೆಪದಲ್ಲಿ ಒಂದು ಸಾಮಾಜಿಕ ಚಿಂತನೆಯನ್ನು ಇಲ್ಲೆಲ್ಲ ಹರಿಯಬಿಟ್ಟಿದ್ದಾನೆ. ಕರ್ಣನ ಪಾತ್ರದ ಬಗ್ಗೆ ಮಮಕಾರ ತೋರಿ 'ಕರ್ಣರಸಾಯನಮಲ್ತೆ ಭಾರತಂ' (೧೨-೧೦೪ನೇ) ಎಂದು ಹೇಳಿದ್ದಾನೆ. ಕರ್ಣನ ಬಗೆಗೆ ಆಡುವ ಕೃಷ್ಣನ ಮಾತು ಕರ್ಣನ ವ್ಯಕ್ತಿತ್ವವನ್ನು ಸಾಮಾಜಿಕ ಅನಿವಾರ್ಯತೆಯನ್ನು ಮತ್ತೊಮ್ಮೆ ಮುಂದಿಡುತ್ತದೆ. 'ಕರ್ಣಂಗೊಡ್ಡಿತ್ತುದಲ್ ಭಾರತಂ' ಎನ್ನುವ ಇಲ್ಲಿನ ಮಾತಂತೂ ಬಹು ಆಯಾಮವುಳ್ಳ ಅರ್ಥವನ್ನು ಹೊಳೆಯಿಸುತ್ತದೆ. ಕಥಾನಾಯಕನಾಗಿ ಅರ್ಜುನನ ಪಾತ್ರವನ್ನು ತೆಗೆದುಕೊಂಡಿದ್ದರೂ ಪ್ರತಿನಾಯಕ ಪಾತ್ರವಾದ ದುರ್ಯೋಧನನ ಬೆಳವಣಿಗೆಯಲ್ಲಿ ಆಸಕ್ತಿ ವಹಿಸಿದ್ದರಿಂದಾಗಿ ಅವನೇ ಕಥಾ- ನಾಯಕನೇನೋ ಎಂಬಷ್ಟರ ಮಟ್ಟಿಗೆ ಆ ಪಾತ್ರ ವಿಜೃಂಭಿಸುವಂತೆ ಕವಿ ಮಾಡಿದ್ದಾನೆ. ಕಾವ್ಯದ ಉದ್ದಕ್ಕೂ ಕೌರವನನ್ನು "ಏನ್ ಅಭಿಮಾನಧನಂ ಸುಯೋಧನಂ" ಎಂದು ಕರೆದು ಸನ್ಮಾನಿಸಿದ್ದಾನೆ. ಅವನು ಸತ್ತ ಮೇಲೆ ಈ ಛಲದಂಕಮಲ್ಲನಿಗೆ ಚರಮಗೀತೆಯ ಪುಷ್ಪಾಂಜಲಿಯನ್ನು ಅರ್ಪಿಸುತ್ತೇನೆ ಎಂದಿದ್ದಾನೆ.

ಹೀಗೆ ಕವಿಯು ಕ್ಷಾತ್ರ ಯುಗದವನಾಗಿ ತನ್ನ ಕೃತಿಯಲ್ಲಿ ಪಾತ್ರಗಳಿಗೆ ತನ್ನದೇ ಆದ ಮನೋಧರ್ಮದಲ್ಲಿ ಅವುಗಳನ್ನು ಪುಷ್ಟೀಕರಿಸಿದ್ದಾನೆ. ಇವನು ಕವಿಯಾಗಿದ್ದಂತೆ

ಕವಿಯೂ ಸಹ ಆಗಿರುವುದಕ್ಕೆ ಅವನ ಕಾಲವೇ ಕಾರಣವಾಗಿದೆ. ೧೦ನೇ ಶತಮಾನಕ್ಕೆ ತಕ್ಕಂತೆ ಶೋಷಿತ ಪಾತ್ರಗಳಿಗೆ ಜೀವ ತುಂಬಿದ್ದಾನೆ. ಅವನ್ನು ಮೇಲಕ್ಕೇರಿಸಿದ್ದಾನೆ. ಅದಕ್ಕಾಗಿಯೇ "ನೆನೆಯದಿರಣ್ಣ ಭಾರತದೊಳ್ ಪೆರರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ" ಎಂದಿದ್ದಾನೆ.

ಧಾರ್ಮಿಕ ವಸ್ತುವನ್ನು ಆರಿಸಿಕೊಂಡಿದ್ದರಿಂದ ಕವಿಯ ಪ್ರತಿಭೆಗೆ ಅವಕಾಶ ಕಡಿಮೆಯಾಯಿತು ಎನ್ನುವ ಮಾತುಗಳಿದ್ದರೂ, ಪಂಪ ತನ್ನ ಪ್ರತಿಭಾ ಪ್ರದರ್ಶನಕ್ಕೆ ಹಲವಾರು ಅವಕಾಶಗಳನ್ನು ಕಲ್ಪಿಸಿಕೊಂಡಿದ್ದಾನೆ. ಭರತನು ಚಕ್ರರತ್ನವನ್ನು ಮುಂದಿಟ್ಟುಕೊಂಡು ಯುದ್ಧಕ್ಕೆ ಹೊರಟು ಗಂಗಾನದಿಯ ತಡಿಯಲ್ಲಿದ್ದ ವನವನ್ನು ಹೊಗಲು ದುಂಬಿಗಳ ಝೇಂಕಾರ, ಕೋಗಿಲೆಗಳ ಇನಿದನಿ, ಇವುಗಳ ತಾಳಗತಿಯೊಡನೆ ಮಲಯಾನಿಳನೆಂಬ ನರ್ತಕನು ಲತಾ ನರ್ತಕಿಯನ್ನು ಸುಂದರವಾಗಿ ಆಡಿಸುವುದನ್ನು ಕಂಡನು. ಮಾವಿನಮರವನ್ನು ಕಂಡ ಒಬ್ಬಳು 'ತಳಿರೊಳ್ ನೀನೆ ಬೆಡಂಗನಯ್, ನನೆಗಳೊಳ್ ನೀಂ ಚೆನ್ನಿಗನಯ್, ಪುಷ್ಪ ಸಂಕುಳದೊಳ್ ನೀನೆ ವಿಳಾಸಿಯಯ್....' ಮುಂತಾಗಿ ಉದ್ಗಾರ ತೆಗೆದಳಂತೆ. ಭರತನ ರಾಣೀವಾಸದ ಸಂಭಾಷಣೆಯಲ್ಲಿಯೂ ಪಂಪನ ಪ್ರಕೃತಿ ಪ್ರೀತಿ ನಾಟಕೀಯ ಸಂವಿಧಾನದಲ್ಲಿ ಹೊರಹೊಮ್ಮಿದೆ. ಅಂತಃಪುರದ ಸ್ತ್ರೀಯರು ವನದಿಂದ ಬೀಳ್ಕೊಡುವಾಗ 'ಮೊಗ್ಗುಗಳ ಕುಚ್ಚನ್ನೂ, ತಳಿರುಗಳ ಗೊಂಚಲನ್ನೂ, ಸುಂದರವಾಗಿ ಆಡುತ್ತಿರುವ ಕೊಂಬೆಗಳಲ್ಲಿನ ಮಿಡಿಗಾಯಿಗಳನ್ನೂ ಪ್ರೀತಿಸದೆ, ರಕ್ಷಿಸದೆ, ಸೋನೆ ಸುರಿಯುವಂತೆ ಹಿಂಸಾಚಾರಗಳಿಂದ ತರಿದು ನೋಯಿಸಿ ಕಾಡಿಸಿದೆವು. ಈ ಎಲ್ಲ ಅಪರಾಧಗಳನ್ನು ಮನಸ್ಸಿಗೆ ತಂದುಕೊಳ್ಳದೆ ನಾವೂ ನೀವೂ ಜೊತೆಯಲ್ಲಿ ಇದ್ದುದನ್ನು ಮಾತ್ರ ಸ್ಮರಿಸಿಕೊಳ್ಳಿ' ಎಂದು ಹೇಳಿರುವ ಮಾತುಗಳಲ್ಲಿ ಬದುಕಿನಲ್ಲಿ ಕೊನೆಯಲ್ಲಿ ಉಳಿಯುವುದು ಮಧುರಸ್ಮೃತಿ ಎಂಬ ಸಿದ್ಧಾಂತವನ್ನು ಪಂಪ ಸಾರಿದ್ದಾನೆ.

ಆದಿಪುರಾಣ ಒಂದು ಧಾರ್ಮಿಕ ಕಾವ್ಯವಾದರೂ ಅದರಲ್ಲಿ ಕವಿಯ ಕಾಲದ ಹಲವಾರು ಮೌಲ್ಯಗಳು ಎಡೆಪಡೆದಿರುವುದನ್ನು ಕಾಣಬಹುದು. ಚಕ್ರರತ್ನವನ್ನು ಮುಂದಿಟ್ಟುಕೊಂಡು ಭರತ ಯುದ್ಧಕ್ಕೆ ಬರಲು ಮಗಧ ಅವನನ್ನು ತಡೆಯುವನು. ಆಗ ಅವನ ಸೈನಕರು ಆಡಿಕೊಳ್ಳುವ ಮಾತುಗಳು ಅಂದಿನ ಜೀವನ ಮೌಲ್ಯಗಳನ್ನು ಸಾರುತ್ತವೆ.

ಪರಿಭವದ ಪೊಱೆಯನಾಂತಿ
ರ್ದರಾತಿಗಳ್ಗಳ್ಕಿ ತನ್ನ ಕುಲಮುಂ ಚಲಮುಂ

ದೊರೆಯುಂ ಕಿಡೆ ಬಾಜ್ವಿಂ ಗಂ
ಡರೂಪಿನೊಳ್ ಗಂಡನಲ್ತು ಪೆಂಡತಿಯೆ ವಲಂ (೧೨-೯೬)
ಅದಟಂ ಕೊಂಡಾಡದೆ ಬೇ
ಡಿದರ್ಗೀಯದೆ ಮಱೆಗೆವಂದರಂ ಕಾಯದೆ ನೀ
ಳ್ದೊದವಿದ ಜಸಮನುಪಾರ್ಜಿಸ
ದಧಮನದೇತರ್ಕೆ ಬಾರ್ತೆ ಜೀವನ್ಮೃತಕಂ ॥೧೨-೯೭

ಸಾವಿರ ವರ್ಷಗಳ ಹಿಂದೆಯೇ 'ಮನುಷ್ಯ ಜಾತಿ ತಾನೊಂದೆ ವಲಂ' ಎಂದು ಮಾನವೀಯತೆಯ ಸಂದೇಶ ಸಾರಿದ ಪಂಪ ಆ ಕಾಲದಲ್ಲಿಯೇ ಮನುಷ್ಯ ಹೀಗಿರಬೇಕೆಂಬ ಕಲ್ಪನೆಗಳನ್ನು ನಿರ್ಮಿಸಿಕೊಟ್ಟು ಒಡೆಯುತ್ತಿರುವ ಮನುಷ್ಯನನ್ನು ಮರಳಿಕಟ್ಟಲು ಪ್ರಯತ್ನಿಸಿದ್ದಾನೆ. ಮಾನವ ಜೀವನದ ಮೌಲ್ಯ, ಸೋದರ ಸಂಬಂಧ, ನಿಸರ್ಗ ಪ್ರೀತಿಗಳಿಂದ ಕೂಡಿದ ಪಂಪನ ಕೃತಿ ಉತ್ಕೃಷ್ಟ ಕೃತಿಯಾಗಿದೆ. ಕಾವ್ಯಧರ್ಮದ ಮೂಲಕವಾಗಿ ಸಮಾಜದೊಳಗೆ ಧರ್ಮವು ಪಸರಿಸಬೇಕೆನ್ನುವುದು ಪಂಪನ ಆಶಯ. 'ಅಱಿವುದು ಕಾವ್ಯಧರ್ಮಮಂ ಧರ್ಮಮುಮಂ' ಎಂದು ಅಂದವಾಗಿ 'ಎಳಮಾವು ಸುಗ್ಗಿಯೊಳೊಪ್ಪುವಂತೆ' ಕಾಣಿಸಿದ ಪಂಪ ಜೈನಧರ್ಮವೆನ್ನದೆ ಬರಿಯ ಧರ್ಮ ಎಂದು ಮಾತ್ರವೇ ಹೇಳಿದ್ದಾನೆ. ದಯೆ, ದಮ, ದಾನ, ತಪ, ಶೀಲ ಎಂಬ ಪಂಚಾಂಶಗಳೇ ಧರ್ಮದ ಮೈ ಎಂದ ಪಂಪನ ಮಾತುಗಳು ಎಲ್ಲ ಧರ್ಮಗಳ ಮೂಲ ನೆಲೆಗಟ್ಟುಗಳೇ ಆಗಿವೆ. ಎಲ್ಲ ಧರ್ಮಗಳಿಗೂ ಆಧಾರವಾದ ಪ್ರಪಂಚ ಧರ್ಮವನ್ನು ಅಳವಡಿಸಿ-ಕೊಂಡಿದ್ದಾನೆ.

೧೫ನೇ ಶತಮಾನದಿಂದ ಈಚೆಗೆ ಬಂದಿರುವ ಯುಗ ಭಕ್ತಿ ಯುಗವೆಂದು ಹೇಳಬಹುದು. ರತ್ನಾಕರವರ್ಣಿಯು ಈ ನಿಟ್ಟಿನಲ್ಲಿ ತನ್ನ 'ಭರತೇಶವೈಭವ' ಕೃತಿಯನ್ನು ಬರೆದಿದ್ದಾನೆ. ವೈದಿಕಧರ್ಮ, ವೀರಶೈವಧರ್ಮ, ಜೈನಧರ್ಮದ ಕಾಲ ಅದಾಗಿತ್ತು. ವೈದಿಕಧರ್ಮದಲ್ಲಿ ಶ್ರೀಕೃಷ್ಣನ ಪಾತ್ರದ ಮೂಲಕ ಭಕ್ತಿಯನ್ನು ಪ್ರಸಾರ ಮಾಡುವುದಾಗಿತ್ತು. ಜೈನಧರ್ಮದಲ್ಲಿ ಲೌಕಿಕ ಭೋಗಗಳನ್ನು ತ್ಯಜಿಸಿ ದೇಹವನ್ನು ದಂಡಿಸಿ ತಪಸ್ಸನ್ನು ಎತ್ತಿಹಿಡಿದು ಕೇವಲ ವೈರಾಗ್ಯವನ್ನು ಸಾರಿ ಹೇಳುತ್ತಿತ್ತು. ವೈದಿಕಧರ್ಮ ಕರ್ಮಕಾಂಡಗಳಿಗೆ ಕಟ್ಟುಬಿದ್ದು, ಮೇಲುಕೀಳುಗಳ ವರ್ಣವ್ಯವಸ್ಥೆಯಿಂದ, ಧರ್ಮ ಮತ್ತು ಆಧ್ಯಾತ್ಮವೆಂದರೆ ಕೇವಲ ಕೆಲವರ ಸ್ವತ್ತು ಮಾತ್ರ ಎಂಬ ಭಾವನೆ ಸಾಮಾಜಿಕವಾದ ಅತೃಪ್ತಿಯನ್ನು ಉಂಟುಮಾಡಿತ್ತು. ಇದಲ್ಲದೇ ನಿರೀಶ್ವರವಾದಿಗಳಾದ ಚಾರ್ವಾಕರು ಒಂದೆಡೆ, ಶೂನ್ಯವಾದಿಗಳಾದ ಬೌದ್ಧರು ಒಂದೆಡೆ ತಮ್ಮ ತಮ್ಮ ಮತವನ್ನು ಮಂಡಿಸುತ್ತಿದ್ದರು. ವೀರಶೈವಧರ್ಮದವರು ಸತಿಪತಿಗಳೊಂದಾಗಿಯೂ,

ಶಿವಭಕ್ತಿ ಸಾಧ್ಯ ಅಥವಾ ಸಂಸಾರದಲ್ಲಿದ್ದು ಶಿವಯೋಗವನ್ನು ಸಾಧಿಸಬಹುದೆಂದು ಹೇಳುತ್ತಿದ್ದರು. ಇಹ–ಪರದ ಕಲ್ಪನೆ ಇವರಲ್ಲಿತ್ತು.

ವಿಶೇಷವಾಗಿ ಹೇಳಬೇಕೆಂದರೆ ಇವನ ಕಾಲ ಭಕ್ತಿಯುಗ. ರತ್ನಾಕರವರ್ಣಿಯು ತನ್ನ ಕೃತಿಯಲ್ಲಿ ಯೋಗ–ಭೋಗ ಸಮನ್ವಯವನ್ನು ಸಾಧಿಸಿದ್ದಾನೆ. ಇವನು ತನ್ನ ನಾಯಕನನ್ನು ಚಿತ್ರಿಸಿದ ಬಗೆ ಹೀಗೆ: ೯೬,೦೦೦ ಜನ ಹೆಂಡತಿಯರೊಡನೆ ಸುಖಿಸಿ, ಭೋಗದಲ್ಲಿದ್ದು, ಕೊನೆಗೆ ತನ್ನ ತಮ್ಮ ಬಾಹುಬಲಿಯು ತಪಸ್ಸಿಗೆ ಹೋದಾಗಲೂ ಮನಃಪರಿವರ್ತನೆಯಾಗದೆ, ಅದರ ನಂತರವೂ ಭೋಗಿಯಾಗಿ ತನ್ನ ಹೆಂಡತಿ, ಮಕ್ಕಳೊಡನೆ ಜೀವನ ನಡೆಸಿ, ಮಕ್ಕಳು ಚಿಕ್ಕ ವಯಸ್ಸಿನಲ್ಲಿಯೇ ದೀಕ್ಷೆಯನ್ನು ವಹಿಸಿ ತಪಸ್ಸಿಗೆ ಹೋದಾಗಲೂ ಸ್ವಲ್ಪ ಕಾಲ ದುಃಖಿತನಾಗಿ ನಂತರ ರಾಜ್ಯಭಾರ ಮಾಡಿ ಭೋಗದ ತುಟ್ಟತುದಿಯನ್ನು ಮುಟ್ಟಿದನು. ಭರತನು ಯುದ್ಧಕ್ಕೆ ಹೋದಾಗಲೂ ಸಹ ಜಿನ ಬಸದಿಗೆ ಹೋಗಿ ಭಕ್ತಿಪೂರ್ವಕವಾಗಿ ವಂದಿಸುತ್ತಿದ್ದನು. ಇದು ಅವನ ಭಕ್ತಿಯ ದ್ಯೋತಕವಾಗಿದೆ. ಅಂದರೆ ಇವನು ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿ–ಕೊಳ್ಳುತ್ತಿದ್ದ ಸಂದರ್ಭದಲ್ಲಿ ಕೆನ್ನೆಯಲ್ಲಿ ನೆರೆಗೂದಲನ್ನು ಕಂಡು ವೈರಾಗ್ಯಪರಿಣಿತರಾಗಿ ದೀಕ್ಷೆ ಪಡೆದು ಯೋಗಿಯಾದನು. ಇವನು ಸಂಸಾರದಲ್ಲಿದ್ದು ಭೋಗವನ್ನು ಅನುಭವಿಸಿ ಕೊನೆಗೆ ಯೋಗಿಯಾದನು.

ಕನ್ನಡದ ಜನಪ್ರಿಯ ಕವಿಗಳಲ್ಲಿ ರತ್ನಾಕರವರ್ಣಿಯೂ ಒಬ್ಬ. ಇವನು ಪ್ರಮುಖವಾಗಿ ಸಾಂಗತ್ಯ ಕವಿ.

ಇವನು ಜೀವಿಸಿದ್ದು ಕಾಲದಲ್ಲಿ ಜಿನಧರ್ಮ ಅಷ್ಟೇನು ಜನಮಾನ್ಯವಾಗಿರಲಿಲ್ಲ. ತನ್ನ ಧರ್ಮವನ್ನು ಪುನರುಜ್ಜೀವನಗೊಳಿಸಲೋ ಎಂಬಂತೆ ಸಮಕಾಲೀನ ಧರ್ಮಗಳಾದ ವೀರಶೈವ ಮತ್ತು ವೈದಿಕ ಧರ್ಮಗಳ ಕೆಲವು ಪರಿಕಲ್ಪನೆಗಳನ್ನು ತನ್ನ ಕಾವ್ಯವಾದ 'ಭರತೇಶ ವೈಭವ'ದಲ್ಲಿ ಅಳವಡಿಸಿಕೊಂಡ ಭೋಗದಲ್ಲಿದ್ದೂ ಮುಕ್ತಿಯನ್ನು ಪಡೆಯಬಹುದು. ಅವೆರಡರ ಸಮನ್ವಯ ಸಾಧಿಸಿದರೆ ಎಂಬುದು ಇವನ ಮುಖ್ಯ ಪ್ರತಿಪಾದನೆ. ಇದನ್ನು ತನ್ನ ಕಾವ್ಯದ ನಾಯಕನ ಜೀವನದಲ್ಲಿ ತಂದು ನೂತನ ಪ್ರಯೋಗ ಮಾಡಿದ್ದಾನೆ. ಜೈನ ಸಂಪ್ರದಾಯದ ಮೂಲ ಕಥೆಗೆ ಕೆಲವು ಮಾರ್ಪಾಡುಗಳನ್ನು ತರಲು ಯತ್ನಿಸಿದ್ದಾನೆ. ಇದರ ಫಲವಾಗಿ ಕೆಲವು ಸಂದಿಗ್ಧಗಳೂ ಕವಿಗೆ ಎದುರಾಗಿದ್ದರೂ ಅವನ್ನು ನಿವಾರಿಸಲು ಸಮರ್ಥಿಸಲು ಸಾಹಸಮಾಡಿದ್ದಾನೆ.

ಜೈನಧರ್ಮ ಇಳಿಮುಖದ ಹಾದಿ ಹಿಡಿದು, ರಾಜಾಶ್ರಯಗಳು ತಪ್ಪಿ ಜನಸಾಮಾನ್ಯರೇ ಜೈನಧರ್ಮವನ್ನು ಅರಿತುಕೊಳ್ಳುವ ಅನಿವಾರ್ಯತೆ ಇತ್ತು. ದ್ವೈತ,

ವಿಶಿಷ್ಟಾದ್ವೈತ ಸಿದ್ಧಾಂತಗಳ ಹಾವಳಿ, ವೀರಶೈವಧರ್ಮದ ಪ್ರಭಾವ, ಎಲ್ಲ ಧರ್ಮ-ದವರನ್ನು ಸಮಾನವಾಗಿ ಕಾಣಬೇಕಾದ, ಪೋಷಿಸಬೇಕಾದ ರಾಜಕೀಯ ಬಿಕ್ಕಟ್ಟನ್ನು ವಿಜಯನಗರದ ಅರಸರು ಎದುರಿಸಬೇಕಾದ ಸ್ಥಿತಿ ಇಷ್ಟು ಸಾಲದೆಂಬಂತೆ ಮುಸ್ಲಿಮರ ಆಕ್ರಮಣ. ಹೀಗಿದ್ದು ಕರಾವಳಿಯ ಸಾಮಂತರಾಜರು ಮಾತ್ರ ಜೈನಧರ್ಮವನ್ನು ಪ್ರೀತಿಯಿಂದ ಪೋಷಿಸಿದ್ದರು. ವಿಜಯನಗರದ ಮಾಂಡಲೀಕರನೇಕರು ಜೈನಧರ್ಮ ನಶಿಸಿ ಹೋಗದಂತೆ ರಕ್ಷಿಸಿದ್ದರು. ಕೆಲವರು ಜೈನಮತ ಅನುಯಾಯಿಗಳೂ ಆಗಿದ್ದರು. ಇಂತಹ ಹೊತ್ತಿನಲ್ಲಿ ರತ್ನಾಕರ ತನ್ನ ಕೃತಿಯನ್ನು ರಚಿಸಿದ್ದು.

# ಅಧ್ಯಾಯ – ೬

# ಮೌಲ್ಯ ಶೋಧನೆ

'ಪಂಪಭಾರತ'ದಲ್ಲಿ ಅನೇಕ ಯುದ್ಧ ವಿಷಯಗಳು, ಸಮರ ಆದರ್ಶಗಳು, ಆಯುಧ ವಿಶೇಷಗಳು, ವೇಳೆವಾಟಿ, ಜೋಳವಾಟಿ, ಸತಿಸಹಗಮನ, ವೀರಮರಣ ಮುಂತಾದವು ಕಾಣಿಸಿಕೊಳ್ಳುತ್ತವೆ. ಅಂದಿನ ಕಾಲದ ವೀರಗಲ್ಲು, ಮಾಸ್ತಿಗಲ್ಲುಗಳು ಇದಕ್ಕೆ ಕಾರಣವಾಗಿ ನಿಲ್ಲುತ್ತವೆ. ಇವು ರಾಷ್ಟ್ರಕೂಟರ, ಚಾಳುಕ್ಯರ ಅಥವಾ ಇನ್ನಾವ ಸಾಮಂತರ ವಿಷಯಗಳಿಗೆ ಸಂಬಂಧಿಸರಲೂಬಹುದು. ಇದರ ಬಗ್ಗೆ ನಮಗೆ ಐತಿಹಾಸಿಕ ಆಧಾರ ನೇರವಾಗಿ ಸಿಗದಿದ್ದರೂ, ಪಂಪನ ಒಟ್ಟು ಜೀವನಾನುಭವವೂ ಮತ್ತು ಹತ್ತನೆಯ ಶತಮಾನದ ಕ್ಷಾತ್ರ ಜೀವನವೂ ಇವುಗಳಲ್ಲಿ ಅಭಿವ್ಯಕ್ತವಾಗಿರು-ವುದರಲ್ಲಿ ಸಂಶಯವಿರಲಾರದು. ಇದನ್ನು ಎಂ.ಎಂ.ಕಲ್ಬುರ್ಗಿಯವರು ರಾಜಕೀಯ ಸಂವೇದನೆಗಳು (ಪಂಪಭಾರತ : ಒಂದು ಅಧ್ಯಯನ, ಪು. ೨೭) ಎಂದು ಕರೆದಿದ್ದರೂ ಸಾಮಾಜಿಕ ಮೌಲ್ಯಗಳೆಂದು ತಿಳಿಯುವುದು ಸೂಕ್ತವೆನಿಸುತ್ತದೆ. ಕಾವ್ಯದಲ್ಲಿ ನಮಗೆ ಈ ಬಗೆಯ ಹಲವಾರು ಆಚರಣೆಗಳು ಕಂಡರೂ ಸಹ ರಾಜಕೀಯ ಇತಿಹಾಸಕ್ಕಿಂತ ಸಾಂಸ್ಕೃತಿಕ ಇತಿಹಾಸಕ್ಕೇ ಹೆಚ್ಚು ಒಳಪಡುತ್ತವೆ. ಪಂಪನು ಬರೆದಿರುವ 'ಪಂಪಭಾರತ'ದಲ್ಲಿ ವ್ಯಕ್ತವಾಗಿರುವ ಜೀವನ ವಿಚಾರದಲ್ಲಿ ಹತ್ತನೆಯ ಶತಮಾನಕ್ಕೆ ಮಾತ್ರ ಸಂಬಂಧಿಸಿದವು ಎಂದಾಗಲೀ, ಹತ್ತನೆಯ ಶತಮಾನದ ಜೀವನ ಪ್ರವಾಹವೆಲ್ಲ ಕಾವ್ಯದಲ್ಲಿ ಪ್ರವಹಿಸಿದೆ ಎಂದಾಗಲಿ ಭಾವಿಸುವುದು ಸರಿಯಾಗದು. ನಿರ್ದಿಷ್ಟ ಕಾಲಮಾನಕ್ಕೆ ಸಿಗದ ಎಷ್ಟೋ ವಿಚಾರಗಳು ದೊರೆಯುವುದು ಸ್ಪಷ್ಟ. ವೇಳೆವಾಜಿ – ಜೋಳವಾಟಿಯಂತಹ ಸಾಮಾಜಿಕ ಮೌಲ್ಯಗಳು ಹತ್ತನೆಯ ಶತಮಾನಕ್ಕೆ ಮಾತ್ರ ಸೀಮಿತವಾದುದಲ್ಲ; ಅನಂತರವೂ ಕಾಣಿಸಿಕೊಳ್ಳುತ್ತದೆ. ಹಿಂದೆಯೂ ಇದ್ದಿರಬಹುದು. ಆದ್ದರಿಂದ ಅವುಗಳನ್ನು ಯಾವುದೇ ನಿರ್ದಿಷ್ಟ ಸಂದರ್ಭದ ಆಚರಣೆಗಳಾಗಿ ತೆಗೆದುಕೊಳ್ಳದೆ, ಜೀವನಾದರ್ಶನಗಳ ಒಟ್ಟು ಅಭಿವ್ಯಕ್ತಿಯಾಗಿ ಪರಿಗಣಿಸಬೇಕಾಗುತ್ತದೆ. (ರಾಗೌ, ಕನ್ನಡ ಕಾವ್ಯಗಳಲ್ಲಿ ಐತಿಹಾಸಿ ವಿಚಾರಗಳು, ಪು. ೧೧೮, ೧೯೯) ಇದನ್ನು ಒಪ್ಪಿಕೊಂಡರೂ 'ಪಂಪಭಾರತ'ದ ಮೌಲ್ಯಗಳು ಆ ಕಾಲದ ಮೌಲ್ಯಪ್ರಜ್ಞೆಯ ವಿಚಾರವಾಗಿ ಮಾತಾಡುತ್ತವೆ ಎಂದು ಹೇಳಬಹುದು.

ಮೌಲ್ಯಪ್ರಜ್ಞೆ ಕವಿಯನ್ನು ಉದ್ದಕ್ಕೂ ಕಾಡಿದೆ. ಪಂಪ ಕವಿ ತನ್ನ ಭಾರತ ಕಾವ್ಯದ ಕಡೆಯಲ್ಲಿ (೧೪–೬೪) ಮಹಾಭಾರತ ವೀರರ ವ್ಯಕ್ತಿ ವೈಶಿಷ್ಟ್ಯಕ್ಕೆ ಸಂಬಂಧಿಸಿದಂತೆ ಒಂದು ಪಟ್ಟಿಕೊಟ್ಟಿದ್ದಾನೆ. ಆ ಪ್ರಕಾರ ಛಲಕ್ಕೆ ದುರ್ಯೋಧನ, ನನ್ನಿಗೆ

ಕರ್ಣ, ಪೌರುಷಕ್ಕೆ ಭೀಮ, ಶಕ್ತಿಗೆ ಶಲ್ಯ, ಅತ್ಯುನ್ನತಿಗೆ ಭೀಷ್ಮ, ಧನುರ್ವಿದ್ಯೆಗೆ ದ್ರೋಣ, ಪರಾಕ್ರಮಕ್ಕೆ ಅರ್ಜುನ, ಧರ್ಮಕ್ಕೆ ಧರ್ಮರಾಯ ನಿಯೋಜಿತರಾಗಿದ್ದಾರೆ. ಇವು ಮೌಲ್ಯಗಳೇ ಅಥವಾ ಗುಣವಿಶೇಷಗಳೇ ಯೋಚಿಸಬೇಕು. ಎಲ್ಲವೂ ಮೌಲ್ಯಗಳಾಗ-ಲಾರವು ಎಂಬುದು ಸ್ಪಷ್ಟ. ಪೌರುಷ, ಶಕ್ತಿ, ಪರಾಕ್ರಮ ಮತ್ತು ಧನುರ್ವಿದ್ಯೆ - ಇವೆಲ್ಲವೂ 'ವೀರ'ವನ್ನೇ ಸೂಚಿಸುತ್ತವೆ. ಹಾಗೆ ನೋಡಿದರೆ ಕೃತಿಯಲ್ಲಿ ಪದೇ ಪದೇ ಚರ್ಚಿತವಾಗಿರುವ ಮೌಲ್ಯಗಳೆಂದರೆ ವೀರ, ಚಲ, ನನ್ನಿ (ಸತ್ಯ) ಮತ್ತು ಶೌಚಗುಣಗಳು. ವಿಶಾಲಾರ್ಥದಲ್ಲಿ ಗುಣಗಳೆಲ್ಲ ಮೌಲ್ಯಗಳೇ; ಆದರೆ ವಿಶೇಷ ಮುದ್ರೆ ಬೀಳುವ ಕಾರಣ ಕೆಲವಷ್ಟೇ ಮೌಲ್ಯಗಳೆಂದು ಪ್ರಸಿದ್ಧವಾಗಿವೆ. 'ವೀರ' ಎನ್ನುವುದು ಆ ಕಾಲದ ಮೌಲ್ಯವೆಂದು ಭಾವಿಸುವುದಾದರೆ, ಅದು 'ಅನುವರ' (ಯುದ್ಧ)ದ ಮೌಲ್ಯವೇ ಹೊರತು, ಬೇರಲ್ಲ. ಈ 'ಯುದ್ಧಮೌಲ್ಯ' ಮತ್ತು 'ಪ್ರಭುತ್ವ' ಒಂದೇ ನಾಣ್ಯದ ಎರಡು ಮಗ್ಗುಲುಗಳಂತೆ ಕಂಡರೆ ಆಶ್ಚರ್ಯವಲ್ಲ. ಅರಿಕೇಸರಿಯನ್ನು ಒಬ್ಬ ವೀರ ಸೇನಾನಿಯೆಂದು ಪಂಪ ಕಂಡಿದ್ದಾನೆ. ಆ ಕಾಲದ ಅಪರೂಪದ ವೀರ ಅವನಾಗಿದ್ದ-ರಿಂದ ಪಂಪನು ಅವನ ವೀರ ವ್ಯಕ್ತಿತ್ವವನ್ನು ಅರ್ಜುನನಲ್ಲಿ ಹೇಳಲು ಉಪಕ್ರಮಿಸಿದ್ದಾನೆ. "ಜಸಂ ನಿಲ್ವನ್ನೆಗಂ ಕಾಮವೆಂ" (೧೧-೧೬) ಎಂಬುದು ಆ ಕಾಲದ ಎಲ್ಲಾ ವೀರರ ಪ್ರತಿಜ್ಞೆ-ಯಾಗಿತ್ತು. ವೀರಮೌಲ್ಯದ ಜೊತೆಗೆ 'ಜಸ'ದ ಕಲ್ಪನೆ ಯಾವೊತ್ತು ಸೇರಿಕೊಂಡಿರುತ್ತದೆ. "ಒಡಲುಂ ಪ್ರಾಣಮುಮೆಂಬಿವು ಕಿಡವಿದುವು ಜಸಮದೊಂದೆ ಕಿಡದು" (೧೨-೧೮೧) ಅದಕ್ಕಾಗಿ ಅದನ್ನು ಬಲವಾಗಿ ಹಿಡಿದು ನಡೆದಿದ್ದೇನೆಂದು ಕರ್ಣ ಹೇಳುವ ಒಂದು ಮಾತಿದೆ. 'ಜಸ'ದ ಬಗ್ಗೆ ಕರ್ಣ ತೆಗೆದುಕೊಂಡ ಈ ನಿರ್ಧಾರ 'ಪಂಪಭಾರತ'ದ ವೀರ ಮೌಲ್ಯಕ್ಕೊಂದು ಉದಾಹರಣೆ. ಮುಂದಿನ ಪದ್ಯದಲ್ಲಿಯೇ (೧೨-೧೮೨) ಬರುವ "ಮನುಷ್ಯನ ಆಗುಹೋಗುಗಳೆಲ್ಲ ದೈವಾಯುತ್ತ" ಎಂಬ ಮಾತು 'ಪುರುಷಕಾರ'ದ ಮೇಲಿರುವ "ವೀರ" ಯುಗಕ್ಕೆ ಹಿನ್ನಡೆಯುಂಟು ಮಾಡುವಂತಿದೆ. 'ಕ್ಷತ್ರಿಯಧರ್ಮ'ವೆಂದರೆ ಹೋರಾಡುವುದು, ಅಳುವುದಲ್ಲ ಎಂಬ ಇನ್ನೊಂದೆಡೆಯ ಮಾತು (೧೦-೪೮) ಪಂಪನ ಕಾಲದ ವೀರ ಮೌಲ್ಯವನ್ನು ವ್ಯಕ್ತಮಾಡುವುದು.

'ವೀರಮೌಲ್ಯ'ಕ್ಕೆ ಕೃಷ್ಣನ ಕೈಯಲ್ಲಿ ಚಕ್ರ ಹಿಡಿಸಿದ ಭೀಷ್ಮನ ಯುದ್ಧ ಸಂದರ್ಭ ಒಂದು ಮುಖ್ಯವಾದ ಪ್ರಕರಣ. ಕುಮಾರವ್ಯಾಸನಲ್ಲೂ ಇದೇ ಪ್ರಸಂಗ ಬಂದಿದ್ದು, ಅಲ್ಲಿ ಕೃಷ್ಣ ಚಕ್ರ ಹಿಡಿದಾಗ ಭೀಷ್ಮ ಅಸ್ತ್ರ ತ್ಯಾಗ ಮಾಡುತ್ತಾನೆ. ಆದರೆ ಪಂಪನಲ್ಲಿ ಕೃಷ್ಣ ಚಕ್ರ ಬಿಟ್ಟರೆ ಭೀಷ್ಮ ತನಗೆ 'ಅಸುರಾರಿ' ಕೊಟ್ಟ 'ವೈಷ್ಣವಾಸ್ತ್ರ'ವನ್ನು ಬಿಡುವುದಿದೆ (೧೧-೨೧-೨೪). ಕುಮಾರವ್ಯಾಸನಲ್ಲಿ ಭೀಷ್ಮ ಭಕ್ತಿಯಿಂದ ಗೆದ್ದರೆ, ಇಲ್ಲಿ ವೀರದಿಂದ ಗೆಲ್ಲಲು

ಹೋಗುತ್ತಾನೆ. ಈ ಬದಲಾವಣೆಗೆ ಕಾರಣವಾಗಿರುವುದು ಪಂಪನ ಯುಗಧರ್ಮ. ಆದ್ದರಿಂದ ಪಂಪನ ಯುಗದ ವೀರಮೌಲ್ಯವೇ ಇಲ್ಲಿಯೂ ಕೆಲಸ ಮಾಡಿದೆ.

ವೀರ ಮೌಲ್ಯದ ವ್ಯಾಪ್ತಿಯಲ್ಲಿಯೇ ಬರುವಂಥದು 'ಚಲ'. 'ಚಲದೊಳ್ ದುರ್ಯೋಧನಂ' ಎಂದು ಪಂಪ ಹೇಳಿದರೂ, ಉಳಿದವರಲ್ಲಿಯೂ ಅದನ್ನು ಅವನು ಕಂಡಿದ್ದಾನೆ. 'ಚಲ' ಎಂಬುದು ನಾಯಕನಲ್ಲಾಗಲೀ, ಪ್ರತಿನಾಯಕನಲ್ಲಾಗಲೀ ಇರಬೇಕಾದ ಗುಣ ಎಂಬಂತೆ ಪಂಪ ಯೋಚಿಸಿದ್ದಾನೆ. ಅವರಲ್ಲಿಯೂ ಯುದ್ಧ ವೀರನಾದವನಿಗೆ ಇದು ಅನಿವಾರ್ಯವಾದ ಲಕ್ಷಣ. ಚಲದ ವಿಷಯ ಬಂದಾಗಲೆಲ್ಲ 'ಕುಲ'ದ ಪ್ರಸ್ತಾಪ ಬರುತ್ತದೆ. ಪ್ರಾಯಶಃ 'ಚಲ' ಕ್ಷತ್ರಿಯ ವೀರರಿಗೆ ಸಂಬಂಧಿಸಿದ್ದೆಂಬ ಭಾವನೆ ಕೆಲವರಲ್ಲಿ ಇರಲು ಸಾಕು. ಕರ್ಣ ಪ್ರಸಂಗದಲ್ಲಿ ಅದನ್ನು ಮೀರುವ 'ಸಾಮಾಜಿಕ ಮೌಲ್ಯವನ್ನು ಕಾಣುತ್ತೇವೆ. ಮೂಲಭಾರತದಲ್ಲಿಯೂ ಇದು ಇದೆಯಲ್ಲವೇ? ಈ ವ್ಯಾಪ್ತಿಯಲ್ಲಿ ಬರದೆ, ಸ್ವತಂತ್ರವಾದ ಸ್ವಸಂಪೂರ್ಣವಾದುದು 'ನನ್ನಿ'. ಕರ್ಣರಿಗೆ ಸಂಬಂಧಿಸಿದ ಹಾಗೆ ಇದು 'ಪಂಪಭಾರತ'ದಲ್ಲಿ ಬಳಕೆಯಾಗಿದೆ. ಎಲ್ಲಾ ಕಾಲಕ್ಕೂ ಇದು ಮೌಲ್ಯವೇ; ಮನುಷ್ಯ ಅಪವಿತ್ರಗೊಳಿಸಿದರೆ ಮಾತ್ರ ಅದು ಅಪಮೌಲ್ಯವಾಗಬಹುದು. ಹತ್ತನೆಯ ಶತಮಾನಕ್ಕೆ ಮಾತ್ರ ಸೀಮಿತ ಮಾಡಿಕೊಂಡು ಅದನ್ನು ಹೇಳುವುದು ಕಷ್ಟ; ಆದರೆ ಪಂಪನ ಕಾಲದಲ್ಲಿ ನಡವಳಿಕೆಗೆ ಹೆಚ್ಚಿಗೆ ತಂದರೆಂದು ಬೇಕಾದರೆ ಹೇಳಬಹುದು. ಕರ್ಣನಲ್ಲಿ 'ನನ್ನಿ' ಮತ್ತು 'ವೀರ' ಎರಡೂ ಸಂಬಂಧಿಸಿದಂತೆಯೇ ಬರುತ್ತವೆ. ಆದರೆ 'ನನ್ನಿ' ವೀರನನ್ನು ಹೊರತುಪಡಿಸಿಯೂ ಇರಬಹುದು. ಆದರೂ ಪಂಪ "ಕಾದಿನೆಗೞ್ದಾತನೆ ನನ್ನಿಯ ಬೀರದಾರ್ಗಂ" (೧೨-೧೯೭) ಎಂದು ಹೇಳುತ್ತಾನೆ. ಯುದ್ಧಕ್ಕೆ ಸಂಬಂಧಿಸಿದ ಹಾಗೆ 'ಬೀರ'ವನ್ನು ತರುವುದೇನೂ ಸರಿ; ಆದರೆ ಯುದ್ಧಕ್ಕೆ ನನ್ನಿಯ ಸಂಬಂಧ ಕಲ್ಪಿಸುವುದು ವಿಚಾರಣೀಯ. ಪಂಪ ಚಿತ್ರಿಸುತ್ತಿರುವುದು ವೀರಯುಗವಾದ್ದರಿಂದ ಆ 'ವೀರ' 'ಯುದ್ಧವೀರ'ನಾದ್ದರಿಂದ 'ನನ್ನಿ'ಯನ್ನು 'ಯುದ್ಧ'ದ ಜೊತೆಗೆ ಬೆಸೆದಿರಬಹುದೆನಿಸುತ್ತದೆ.

ಇದನ್ನು ಕರ್ಣನಿಗೆ ಮಾತ್ರವಲ್ಲದೆ ಭೀಷ್ಮನಿಗೂ ಅನ್ವಯಿಸಿ ಹೇಳಿರುವುದುಂಟು. ಸತ್ಯವತಿ ರಾಜ್ಯಭಾರವನ್ನು ಸ್ವೀಕರಿಸೆಂದು ಕೇಳಿದಾಗ ಭೀಷ್ಮ "ನನ್ನಿಯ ನುಡಿಯರ ಕಿಡೆನೆಗೞ್ ನಾನುಮೆರಡಂ ನುಡಿದೊಡೆ ಹರಿಹರ ಹಿರಣ್ಯಗರ್ಭರ್‌ನಗರೇ" (೧-೮೨) ಎಂಬುದಾಗಿ ಉತ್ತರಿಸುವನು.

ನನ್ನಿಯ ಮಾತನ್ನು ಕೊಟ್ಟ ಮಾತಿಗೆ ತಪ್ಪದಂತೆ ನಡೆದುಕೊಳ್ಳುವವರಿಗೆ ಕವಿ ಬಳಸಿರುವಂತೆ ತೋರುತ್ತದೆ. ಕರ್ಣ ಮತ್ತು ಭೀಷ್ಮರಿಬ್ಬರಿಗೂ ಇಂತಹ ಇಕ್ಕಟ್ಟು

ಬಂದಿದ್ದು, ಆ ಸಂದರ್ಭಗಳಲ್ಲಿ ಅವರಿಬ್ಬರೂ ಸತ್ಯ (ನನ್ನಿ)ವನ್ನು ಮೆರೆದದ್ದೂ ಸ್ಪಷ್ಟವೇ ಇದೆ. ಪ್ರಾಯಶಃ ಹತ್ತನೇ ಶತಮಾನದಲ್ಲಿ ಕೊಟ್ಟ ಮಾತನ್ನು ನಡೆಸುತ್ತಿದ್ದವರನ್ನು ಕಂಡು ಪಂಪ ಅದನ್ನೊಂದು ಸಮಕಾಲೀನ ಮೌಲ್ಯವೆಂಬಂತೆ ಪ್ರತಿಪಾದಿಸಿರಬಹುದು. ಪಂಪನ ಸಾಮಾಜಿಕ ಮೌಲ್ಯಗಳಲ್ಲಿ 'ಶೌಚ'ವೂ ಒಂದು : ಇದನ್ನು ಭೀಷ್ಮನಿಗೆ ಅನ್ವಯಿಸಿ ಹೇಳಲಾಗಿದೆ. ಪಂಪ ತನ್ನ ಕಡೆಯ ಪದ್ಯದಲ್ಲಿ (೧೪-೬೪) ಭೀಷ್ಮನಿಗೆ ಸಂಬಂಧಿಸಿದಂತೆ ಬಳಸಿದ 'ಅತ್ಯುನ್ನತಿ' ಈ 'ಶೌಚ'ವೇ ಇರಬೇಕೆನಿಸುತ್ತದೆ. ಭೀಷ್ಮನ ಪಾತ್ರ ಆ ಗುಣಕ್ಕೆ ಹೇಳಿ ಮಾಡಿಸಿದಂತಿದೆ. ಪಂಪನ ಕಾಲದ ಜನರೂ ಈ ಗುಣಕ್ಕೆ ವಿಶೇಷ ಪ್ರಾಶಸ್ತ್ಯಕೊಟ್ಟಿರಬೇಕೆಂದು ತೋರುತ್ತದೆ. ಹಾಗೆ ನೋಡಿದರೆ 'ಶೌಚ' ಎಲ್ಲಿ ಕಾಲದಲ್ಲೂ ಮುಖ್ಯವಾಗಿರುವಂಥದೇ.

ಹೀಗೆ ಮೌಲ್ಯಗಳು ವ್ಯಕ್ತಿ ಜೀವನವನ್ನು ಮಾತ್ರವಲ್ಲದೆ ಸಮಾಜದ ಜೀವನವನ್ನೂ ಆಳುತ್ತದೆ; ಅಳೆಯುತ್ತವೆ ಕೂಡ. ಸಾರ್ವಜನಿಕ ಜೀವನದಲ್ಲಿ ಇವುಗಳ ಬಳಕೆ ಇದ್ದು, ಪಂಪ ತನ್ನ ಭಾರತದಲ್ಲಿ ಇವುಗಳಿಗೆ ಅಭಿವ್ಯಕ್ತಿ ನೀಡಲು ಮುಂದಾಗಿರಬೇಕು. ಮೌಲ್ಯ ಶೋಧನೆ ಕೃತಿಯ ಸಂದರ್ಭದಲ್ಲಿ ಮುಖ್ಯವಾಗಿದ್ದು ಒಳ್ಳೆಯ ಫಲವನ್ನೇ ಅವನಿಗೆ ಕೊಟ್ಟಿದೆ. 'ಪಂಪ ಭಾರತ'ದ ಈ ಮೌಲ್ಯಗಳು ಆ ಕಾಲದ ಜೀವನ ಮೌಲ್ಯಗಳೇ ಆಗಿದ್ದವು. ಸಾಹಿತ್ಯಿಕ ಮೌಲ್ಯ ಮತ್ತು ಜೀವನ ಮೌಲ್ಯಗಳ ನಡುವೆ ಇಲ್ಲಿ ಅಂತಹ ವ್ಯತ್ಯಾಸವೇನೂ ಕಂಡುಬರುವುದಿಲ್ಲ. ಇವೆಲ್ಲವೂ ಲೌಕಿಕವನ್ನು ಬೆಳಗಿದ್ದರ ಪರಿಣಾಮವೆಂದು ಹೇಳಬಹುದು. ಮೌಲ್ಯಗಳು ಒಂದು ತತ್ತ್ವ ಹೇಗೋ ಹಾಗೆಯೇ ಒಂದು ಅನುಭವ ಕೂಡ. ವಿಚಾರದ ಮಟ್ಟದಲ್ಲಿ ನಿಲ್ಲದೆ ಆಚರಣೆಯ ಮಟ್ಟಕ್ಕೆ ಬಂದರೆ ಇವುಗಳಿಗೆ ಎಲ್ಲಿಲ್ಲದ ಅರ್ಥ ಬರುವುದನ್ನು ಕವಿ ಧ್ವನಿಸಿದ್ದಾನೆ.

ರತ್ನಾಕರವರ್ಣಿಯ ಕಾಲದಲ್ಲಿ ವೀರಶೈವ ಧರ್ಮದ ಜೊತೆಗೆ ವೈದಿಕಧರ್ಮ, ಬೌದ್ಧಧರ್ಮ, ಚಾರ್ವಾಕ ಮತ ಮೊದಲಾದವು ಅಸ್ತಿತ್ವದಲ್ಲಿದ್ದರೂ ಕವಿಯನ್ನು ಸೆಳೆದಿದ್ದು ವೀರಶೈವಧರ್ಮ. ಕಾರಣ ಜೈನಧರ್ಮವು ಸೇರಿದಂತೆ ಉಳಿದ ಧರ್ಮಗಳು ಕ್ಲಿಷ್ಟವಾದ ವಿಚಾರ ಮತ್ತು ಕಠಿಣವಾದ ಆಚಾರಗಳಿಂದ ಜನಸಾಮಾನ್ಯರಿಗೆ ಅನುಷ್ಠಾನ ಸುಲಭವಾಗಿರಲಿಲ್ಲ. ಈ ಸುಲಭತೆ ಕಂಡಿದ್ದು ವೀರಶೈವಧರ್ಮದಲ್ಲಿ ಎಂಬುದು ಜಿ.ಎಸ್.ಶಿವರುದ್ರಪ್ಪನವರ ಅಭಿಮತ. ಇದಕ್ಕೆ ಕಾರಣ ಜೈನಧರ್ಮ ಕೇವಲ ಸನ್ಯಾಸ-ಧರ್ಮವಾಗಿತ್ತು. ಲೌಕಿಕ ಭೋಗವನ್ನು ತ್ಯಜಿಸಿ, ದೇಹವನ್ನು ದಂಡಿಸಿ ತಪಸ್ಸನ್ನು ಮಾಡಿ ವೈರಾಗ್ಯವನ್ನು ಮಾತ್ರ ಬೋಧಿಸುತ್ತಿತ್ತು. ಇನ್ನು ವೈದಿಕಧರ್ಮ ಕರ್ಮಕಾಂಡ-ಗಳಿಗೆ ಕಟ್ಟುಬಿದ್ದು ಮೇಲುಕೀಳುಗಳ ವರ್ಣವ್ಯವಸ್ಥೆಯಿಂದ ಆಧ್ಯಾತ್ಮ, ಧರ್ಮ ಎಂದರೆ

ಎಲ್ಲರ ಸ್ವತ್ತಲ್ಲ. ಕೆಲವು ಜನರ ಸ್ವತ್ತು ಎಂಬುದನ್ನು ಸಾಮಾಜಿಕವಾಗಿ ನೋಡು-ವುದಾದರೆ ಅತೃಪ್ತಿಯನ್ನುಂಟುಮಾಡಿತ್ತು. ಇದಿಷ್ಟೇ ಅಲ್ಲದೇ ನಿರೀಶ್ವರವಾದಿ ಗಳಾದ ಚಾರ್ವಾಕರು ಒಂದೆಡೆ, ಶೂನ್ಯವಾದಿಗಳಾದ ಬೌದ್ಧರು ಒಂದೆಡೆ ತಮ್ಮ ತಮ್ಮ ಮತವನ್ನು ಮಂಡಿಸುತ್ತಿದ್ದರು. ಯಾವುದನ್ನು ನಂಬಬೇಕು ಎಂಬ ಗೊಂದಲ ಜನರಲ್ಲಿ ಉಂಟಾಗಿತ್ತು. ವೀರಶೈವ ಧರ್ಮದಲ್ಲಿ ಇಹ-ಪರದ ಕಲ್ಪನೆ ಇತ್ತು.

ಇವನು ತನ್ನ ನಾಯಕನನ್ನು 'ಭೋಗ-ಯೋಗ ಸಮನ್ವಯಿಯನ್ನಾಗಿ ಮಾಡಿದ್ದಾನೆ. ಭೋಗವನ್ನು ನಿರಾಕರಿಸುವುದು ಮತ್ತು ತೀವ್ರ ವೈರಾಗ್ಯವನ್ನು ಸಾಧಿಸುವುದು ಜೈನಧರ್ಮದ ಮೌಲ್ಯಗಳು. ಆದರೆ ರತ್ನಾಕರವರ್ಣಿಯು ಇದಕ್ಕಿಂತಲೂ ಭಿನ್ನವಾದ, ಬೇರೆ ಧರ್ಮಗಳಲ್ಲಿರುವ ಉತ್ತಮವಾದ ಅಂಶಗಳ ಕೆಲವು ಪರಿಕಲ್ಪನೆ-ಗಳನ್ನು ಅಳವಡಿಸಿದ್ದಾನೆ.

ವೀರಶೈವಧರ್ಮದಲ್ಲಿ ಸಂಸಾರದಲ್ಲಿದ್ದರೂ ಶಿವಯೋಗ ಸಾಧಿಸಬೇಕೆಂಬುದೇ ಪ್ರಮುಖ ತತ್ತ್ವ. ಇದರ ಹಿನ್ನೆಲೆಯಲ್ಲಿ ರತ್ನಾಕರವರ್ಣಿ 'ಭೋಗ-ಯೋಗ ಸಮನ್ವಯ' ಸಾಧಿಸಿದ್ದಾನೆ. ಈ ತತ್ತ್ವದಲ್ಲದೇ ರತ್ನಾಕರ ವೀರಶೈವ ಧರ್ಮದ ವಿಶಿಷ್ಟವಾದ ನುಡಿಗಳು, ನುಡಿಗಟ್ಟುಗಳು, ಪರಿಭಾಷೆಗಳು, ವಿಚಾರದ ರೀತಿಗಳಿಂದಲೂ ಪ್ರಭಾವಿತ-ನಾಗಿದ್ದಾನೆ. ಈ ಸಿದ್ಧಾಂತದಲ್ಲಿರುವ ಭೋಗಾಂಗ, ಯೋಗಾಂಗ, ತ್ಯಾಗಾಂಗಳೆಂಬ ಅಂಗಯಂತ್ರಗಳು, ಬಳಸಿ ಬ್ರಹ್ಮಚಾರಿ, ಉಂಡುಪವಾಸಿ, ಮಂಡೆ ಬೆಳೆದು ಮನ ಬೋಳಾದ ತಪಸಿ; ಎಂಬ ನುಡಿಗಟ್ಟುಗಳು ವಚನಕಾರರಲ್ಲಿ ಕಂಡುಬರುತ್ತದೆ.

೧) ರತ್ನಾಕರನು ಶೀವನಿಗೂ ಜಿನನಿಗೂ ಅಭೇದವನ್ನು ಕಲ್ಪಿಸಿ, ಹೇಳಿರುವ ಪದ್ಯಗಳೂ ಸಾಕಷ್ಟು ಕಂಡುಬಂದಿವೆ. ಜಿನವರ್ಣನೆಯಲ್ಲಿ ಶಿವಮೂರ್ತಿಯನ್ನು ಸಮಾವೇಶಗೊಳಿಸಿದ್ದಾನೆ.

೨) ವೈದಿಕ ಧರ್ಮದ ಶ್ರೀ ಕೃಷ್ಣನ ಪ್ರಭಾವವು ಇವನ ಮೇಲಾಗಿದೆ. ಶ್ರೀ ಕೃಷ್ಣ ಭೋಗ-ಯೋಗ ಸಮನ್ವಯಕಾರ. ಇಂಥ ಸಮನ್ವಯ ಭಾರತೀಯ ಪರಂಪರೆಯಲ್ಲಿಯೇ ಇದೆ ಎನ್ನುತ್ತಾರೆ. ಜಿ.ಎಸ್.ಶಿವರುದ್ರಪ್ಪ ಅವರ ಪ್ರಕಾರ 'ಪರಂಪರೆಯಿಂದಲೇ ಬಂದಿರುವ ಆದರೆ ವೀರಶೈವಧರ್ಮದಲ್ಲಿ ಸಹಜವಾಗಿ ಅನುಷ್ಠಾನದಲ್ಲಿದ್ದ ಭೋಗ-ಯೋಗ ಸಮನ್ವಯ ಕವಿಗೆ ಪ್ರೇರಣೆಯಾಗಿ ಒದಗಿರಬೇಕು. ಭರತನು ತನ್ನ ತೊಂಬತ್ತಾರು ಸಾವಿರ ಹೆಂಡಿರೊಡನೆ (ಶ್ರೀ ಕೃಷ್ಣನ ಹೆಂಡಿರ ಸಂಖ್ಯೆ ಹದಿನಾರು ಸಾವಿರದ ಆರರಷ್ಟು) ತಾನು ಒಂದೇ ಸಮಯದಲ್ಲಿ ಹಲವು ರೂಪಗಳನ್ನು ತಾಳಿ ಆ ಹೆಣ್ಣುಗಳನ್ನು ಭೋಗಿಸುವುದು ಕೃಷ್ಣಲೀಲೆಯ ಪ್ರತಿರೂಪವೆಂದು

ಹೇಳಬಹುದಾಗಿದೆ. ಜೈನಧರ್ಮದಿಂದ ತಿರಸ್ಕೃತವಾದ ವೈದಿಕಧರ್ಮದ ಕೃಷ್ಣನ ಪಾತ್ರಕ್ಕೆ, ವ್ಯಕ್ತಿತ್ವಕ್ಕೆ ಮಾರುಹೋಗಿ ತನ್ನ ನಾಯಕನ ಪಾತ್ರದಲ್ಲಿ ಸಮಾವೇಶಗೊಳಿಸಿದ್ದಾನೆ. ಇದಲ್ಲದೆ ಅವನು ತನ್ನ ಕೃತಿಯಲ್ಲಿ 'ಹಂಸ', 'ಹಂಸನಾಥ', 'ಹಂಸಕಲೆ', 'ಹಂಸಯೋಗ', 'ಹಂಸಾನುಭವ' ಮೊದಲಾದ ಪದಗಳನ್ನು ಬಳಸಿದ್ದಾನೆ. ಜೈನಕಾವ್ಯ-ಗಳಲ್ಲಿ ವಯಸ್ಸು ಮುಖ್ಯವಲ್ಲ, ಮನಸ್ಸಿನ ಪರಿಪಾಕದಿಂದ ವೈರಾಗ್ಯ ಬಂತೆಂದರೆ ಮನೆಮಠಗಳನ್ನು ಬಿಟ್ಟು ದೀಕ್ಷೆ ವಹಿಸುವುದು ಸಾಮಾನ್ಯ. ಆದರೆ 'ಭರತೇಶವೈಭವ'-ದಲ್ಲಿ ಯೋಗಿಯೂ ಭೋಗಿಯೂ ಆದ ಭರತೇಶ ತನ್ನ ಮಕ್ಕಳು ವಿರಾಗಿಗಳಾಗಿ, ಜಿನದೀಕ್ಷೆಗೆ ಹೊರಟಾಗ ಮೊದಲು ತಂದೆ-ತಾಯಿಯರ ಋಣವನ್ನು ತೀರಿಸಿ, ಪಡೆದವರ ಸಾಲವನ್ನು ತೀರಿಸಿ ಅನಂತರ ತಪಸ್ಸಿಗೆ ಹೋಗಬೇಕು. ಇಲ್ಲದಿದ್ದರೆ ಮುಕ್ತಿ ಸಿಗುವುದಿಲ್ಲ ಎಂದಿರುವುದನ್ನು ಗಮನಿಸಿದರೆ ಇದು ವೈದಿಕ ಧರ್ಮದ ಸನ್ಯಾಸ ಪರಿಕಲ್ಪನೆಯ ಪ್ರಭಾವವಾಗಿದೆ. ಇದು ಜೈನಧರ್ಮಕ್ಕೆ ಹೊರತಾದ ವಿಚಾರ.

ಜೈನಧರ್ಮ ಬೇರೆ ಧರ್ಮಗಳೊಂದಿಗೆ ಪ್ರತಿಸ್ಪರ್ಧಿಯಾಗಿ ಇತ್ತು. ಇಂಥ ನಿಟ್ಟಿನಲ್ಲಿ ಎಲ್ಲ ಧರ್ಮಗಳ ಉತ್ತಮಾಂಶಗಳನ್ನು ರತ್ನಾಕರ ತನ್ನ ಕಾವ್ಯದಲ್ಲಿ ಅಳವಡಿಸಿದ್ದಾನೆ. ವೀರಶೈವ ಧರ್ಮ, ವೈದಿಕ ಧರ್ಮ ಮತ್ತು ಜೈನಧರ್ಮಗಳಿಂದ ಪ್ರಭಾವಿತನಾಗಿ ಅಲ್ಲಿನ ಮೌಲ್ಯಗಳನ್ನು ಅಂಶಗಳನ್ನು ತನ್ನ ಕೃತಿಯಲ್ಲಿ ಸಮಾವೇಶ-ಗೊಳಿಸಿರುವ ಸಾಧ್ಯತೆಯಿದೆ.

ರತ್ನಾಕರವರ್ಣಿಯ ಭರತ ಯುದ್ಧವೀರನೂ ಹೌದು, ಧರ್ಮವೀರನೂ ಹೌದು. ಷಟ್ಖಂಡ ಮಂಡಲವನ್ನು ಜಯಿಸಿದ ಇವನಿಂದಲೇ ಭಾರತ ಎಂಬ ಹೆಸರು ಬಂದಿತು. ಅನೇಕ ರಾಜರು ಕಪ್ಪಕಾಣಿಕೆಗಳನ್ನಿತ್ತು ತನ್ನ ಮಕ್ಕಳನ್ನು ಮದುವೆ ಮಾಡಿಕೊಟ್ಟಿದ್ದರು. ಎಷ್ಟೇ ಭೋಗದಲ್ಲಿದ್ದರೂ ಸಹ ತನ್ನ ಧರ್ಮದ ಬಗೆಗಿನ ಕಾಳಜಿಯನ್ನು ಬಿಡುತ್ತಿರಲಿಲ್ಲ. ಜಿನ ಬಸದಿಗೆ ಹೋಗಿ ಪೂಜೆ ಸಲ್ಲಿಸುತ್ತಿದ್ದನು. ತನ್ನ ಧರ್ಮದ ಬಗ್ಗೆ ಅಪಾರ ಪ್ರಜ್ಞೆ ಇತ್ತು. ತನ್ನ ಕೆನ್ನೆಯಲ್ಲೇ ನೆರೆಗೂದಲನ್ನು ಕಂಡ ತಕ್ಷಣ ತಪಸ್ಸನ್ನಾಚರಿಸಿ ಮೋಕ್ಷವನ್ನು ಪಡೆದುಕೊಂಡನು. ಇದರ ಪ್ರತೀಕವಾಗಿ ಧರ್ಮವೀರನಾದನು. ಇವೆಲ್ಲವೂ ಸಹ ಅವನ ಕಾಲದಲ್ಲಿ ನಿಷ್ಠೆಯಿಂದಿರಬೇಕಾದ ಮೌಲ್ಯಗಳಾಗಿದ್ದವು.

# ಅಧ್ಯಾಯ – ೭

## ಅಭಿವ್ಯಕ್ತಿ ಮತ್ತು ಛಂದಸ್ಸು

ಪಂಪಯುಗದಲ್ಲಿ 'ಚಂಪೂ' ಕಾವ್ಯರೂಪವು ತನ್ನ ಉಚ್ಛ್ರಾಯಸ್ಥಿತಿಯನ್ನು ಮುಟ್ಟಿದ್ದರಿಂದ ಆ ಕಾಲವನ್ನು ಚಂಪೂ ಯುಗವೆಂದೇ ಖ್ಯಾತವಾಗಿದೆ. ಕಾವ್ಯ ರಚನೆಯು ಲೌಕಿಕ ಹಾಗೂ ಧಾರ್ಮಿಕವೆಂಬ ಎರಡು ಬಗೆಯ ಹಂಚಿಕೆಯಾಗಿತ್ತು.

'ಚಂಪೂ'ಕಾವ್ಯವನ್ನು 'ಮಾರ್ಗಕಾವ್ಯ' ಎಂಬ ಹೆಸರಿನಿಂದಲೂ ಕರೆಯುತ್ತಾರೆ. ಚಂಪೂವಿಗೆ ನಿರ್ದಿಷ್ಟ ಚೌಕಟ್ಟಿದೆ. ಅನೇಕ ಆಶ್ವಾಸಗಳಿರುತ್ತದೆ. ಅಕ್ಷರ ವೃತ್ತಗಳ ಜೊತೆಗೆ ಪಠ್ಯರಚನೆಯಲ್ಲಿ ಕಂದಗಳಿಗೂ ಪ್ರಾಶಸ್ತ್ಯವಿರುತ್ತದೆ. ಚಂಪೂವಿನ ಲಕ್ಷಣ ನಡುನಡುವೆ ಕಥಾ ಸರಣಿಯ ಕೊಂಡಿಗಳನ್ನು ಕೂಡಿಸುವ ಸಲುವಾಗಿಯೇ ವರ್ಣನೆ-ಗಳನ್ನು ತರುವ ಸಲುವಾಗಿಯೇ ಗದ್ಯದ ಬಳಕೆಯಿದೆ. ಪದ್ಯಗಳ ಸಮನ್ವಯವನ್ನು ಸಾಧಿಸುವ ಸಲುವಾಗಿಯೇ ಅಷ್ಟಷ್ಟು ಗದ್ಯಖಂಡಗಳನ್ನು ಜೋಡಿಸಲಾಗುತ್ತದೆ. ಈ ಚಂಪುವಿನಲ್ಲಿ ಬಳಕೆಯಾಗುವ ಗದ್ಯವನ್ನು 'ವಚನ' ಎಮದೂ ಕರೆಯಲಾಗುತ್ತದೆ. ಪಂಪಕವಿ ಸಮನ್ವಯಶೀಲನಾದ್ದರಿಂದ ಮಿಕ್ಕ ವಿಷಯಗಳಂತೆ ಭಾಷೆ-ಶೈಲಿಗಳ ವಿಷಯದಲ್ಲಿಯೂ ಸಮನ್ವಯ ಸಾಧಿಸಿದ್ದಾನೆ. ಮಾರ್ಗಭೂಯಿಷ್ಠವಾದ ಶೈಲಿಯನ್ನು ಪ್ರೀತಿಸಿದರೂ, ಅಚ್ಚಗನ್ನಡವೆನ್ನುವ ದೇಸಿ ಶೈಲಿಯನ್ನು ಅವನು ಕಡೆಗಣಿಸಿಲ್ಲ. "ಕನ್ನಡ ನುಡಿಯ ಸಹಜ ಅರ್ಥವಂತಿಕೆಯೂ, ಕ್ರಿಯಾಶಾಂತಿಯೂ ಕೆಲವು ಪಠ್ಯಗಳಲ್ಲಿ ಅತ್ಯತಿಶಯ ಸಿದ್ಧಾರ್ಥತೆಯನ್ನು ಪಡೆದಿವೆ" ಎಂದೇ ನಾವು ಮೆಚ್ಚಿಕೊಳ್ಳುವಂತಿದೆ ಅವನ ದೇಶಿಪ್ರೇಮ.

ಭರತನ ಚಕ್ರರತ್ನವು ಷಟ್ಖಂಡಮಂಡಲಗಳ ವಿಜಯವನ್ನು ಸಾಧಿಸಿಕೊಟ್ಟು ಕೊನೆಗೆ ಅಯೋಧ್ಯಾಭಿಮುಖವಾಗಿ ಬಂದು, ಪುರುಪ್ರದೇಶ ಮಾಡಲಾಗಿದೆ. ಗಕ್ಕನೆ ನಿಂತುಬಿಟ್ಟಿತು. ಎಂತೆಂತಹ ಮಹಿಮಾ ವಿಶೇಷಗಳನ್ನು ಆ ಚಕ್ರ ಮೆರೆದಿತ್ತು ಎಂಬುದನ್ನು ಪಂಪನು ಹೃದ್ಯವೂ, ಪ್ರೌಢವೂ ಆದ ಮಾರ್ಗ ಶೈಲಿಯಲ್ಲಿ ಹೀಗೆ ವರ್ಣಿಸಿದ್ದಾನೆ.

ಹತವೈರಿಕ್ಷತ್ರ ಚಕ್ರಂ ಭಯಚಕಿತ ಜಗದ್ವೀರಚಕ್ರಂ ವಿನಮ್ರ
ಕ್ಷತಿಚಕ್ರಂ ದೀಪದೀಪ್ತಿ ಪ್ರತಿಹತ ದಿನಕೃಚ್ಚಕ್ರ ತೀವ್ರಾಂಶು ಚಕ್ರಂ
ಜಿತದಕ್ಕಚ್ರಂ ಪ್ರಭಾಪ್ರಜ್ವಳಿತ ದಿಶದಿಶಾ ಚಕ್ರಮುಗ್ರಪ್ರತಾ ಪೋ
ಜಿರತತೇಜಶ್ಚಕ್ರಮಿರ್ದತ್ತೊಳ ಪುಣೆ ಪುರೋಷಾಂತದೊಳ್ ಚಕ್ರಿಚಕ್ರಂ॥[೧]

---

೧. ಡಾ. ಮರಿಯಪ್ಪ ಭಟ್ಟ, 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ', ಪು. ೩೮.

ಭರತನು ತನ್ನ ಸಹೋದರರನ್ನೆಲ್ಲ ತನಗೆ ಶರಣಾಗತರಾಗುವಂತೆ ಮಾಡಿ-ಕೊಳ್ಳಬೇಕೆಂದು ಸಂದೇಶವಾಹಕರಾದ ದೂತರನ್ನಟ್ಟಿದಾಗ ಈ ಪ್ರಸಂಗ ಬಾಹುಬಲಿ ಹೊರತಾಗಿ ಮಿಕ್ಕವರಿಗೆ ವೈರಾಗ್ಯೋದಯಕ್ಕೆ ಕಾರಣವಾಯ್ತು. ಪಂಪನು ಈ ಸಂದರ್ಭದಲ್ಲಿ ಅವನ ಆಲೋಚನೆಯ ಪರಿ ಹೇಗಿತ್ತು ಎಂಬುದನ್ನು ಮನಮೋಹಕ-ವಾದ ದೇಸೀಶೈಲಿಯಲ್ಲಿ ವರ್ಣಿಸಿದ್ದಾನೆ.

ಪಿರಿಯಣ್ಣಂ ಗುರು ತಂದೆಯೆಂದೆಱಗುವಂ ಮುನ್ನೆಲ್ಲಮಿಂತೀಗಳಾ
ಳರಸೆಂಬೊಂದು ವಿಭೇದಮಾದೊಡೆಱಕಂ ಚಿಃ ಕಷ್ಟಮಲ್ತೇ ವಸುಂ
ಧರೆಗಯ್ಯಲ ದಯೆಗೆಯ್ಯ ಮುಂ ಪಡೆದುದರ್ಕಿಂತೀತನೊಳ್ ತೊಟ್ಟ ಕಿಂ
ಕರಭಾವಂ ನಮಗಕ್ಕಿಗೊಟ್ಟು ಮಡಗೊಟಿಣ್ಬಂದಮಂ ಪೋಲದೇ॥ (೧೪-೩೨)

ಇಲ್ಲಿ 'ಅಕ್ಕಿಗೊಟ್ಟು ಮಡಗೊಮಿಣ್ಬಂದಮಂ ಪೋಲದೇ' ಎಂಬ ಗಾದೆ ಮಾತಿನ ಅಚ್ಚಗನ್ನಡವಾಕ್ಯ ಅತ್ಯಂತ ಪರಿಣಾಮಕಾರಿಯಾಗಿದೆ. ಆದ್ದರಿಂದಲೇ ವಿದ್ವಾಂಸರು "ಕವಿತಾಚಾತುರ್ಯ, ವರ್ಣನಾಸಾಮರ್ಥ್ಯ, ಪಾತ್ರನಿರ್ವಹಣೆ, ರಸಪುಷ್ಟಿ, ಹಿತಮಿತಮೃದು-ವಚನಪೂರ್ವವಾದ ಶೈಲಿ, ಪ್ರೌಢವಾದರೂ ಅಲ್ಲಲ್ಲಿ 'ದೇಸಿವೆತ್ತ ದೇಶೀ' ಪ್ರಕಾರಗಳು, ಅಂದವೂ ಮಾರ್ಮಿಕವೂ ಆದ ನಾಣ್ಣುಡಿಗಳು, ದೇಶಾಭಿಮಾನ ಪಂಪನನ್ನು ಕರ್ನಾಟಕ ಕವಿತಾ ಸಾರ್ವಭೌಮನನ್ನಾಗಿ ಮಾಡಿರುವುವು" ಎಂದು ಕೊಂಡಾಡಿದ್ದಾರೆ.

ಪಂಪಾದಿ ಪ್ರಾಚೀನ ಕವಿಗಳು ಅಲಂಕಾರಗಳಿಲ್ಲದ ಕಾವ್ಯಗಳನ್ನು ಕಲ್ಪಿಸಿ-ಕೊಳ್ಳುತ್ತಲೂ ಇರಲಿಲ್ಲ. ಪಂಪನು ಆದಿಪುರಾಣದ ಕಾವ್ಯಸೌಂದರ್ಯವನ್ನು ಹೆಚ್ಚಿಸಲು, ತನ್ನ ಶೈಲಿಯಲ್ಲಿ ಹತ್ತಾರು ಬಗೆಯ ಅಲಂಕಾರಗಳನ್ನು ತಂದಿದ್ದಾನಾದರೂ, ಅವನಿಗೆ ಉಪಮಾಲಂಕಾರವೆಂದರೆ ಹೆಚ್ಚು ಪ್ರಿಯ.

ಭರತ ಚಕ್ರಿಯು ಜಲಕ್ರೀಡೆಗೆಂದು ಇಳಿದಾಗ "ಚಕ್ರಧರಂ ದುಗ್ಧವಾರ್ಧಿಯೊಳ್-ನಿಂದ ಕನಕಗಿರಿಯನೆ ಪೋಲ್ತಂ" (೧೧-೧೩೮) (ಚಕ್ರಧರನು ಕ್ಷೀರಸಮುದ್ರದಲ್ಲಿ ನಿಂತ ಕನಕಪರ್ವತದಂತೆ ಕಂಡನು) ಎಂದು ಉಪಮಿಸಿದ್ದಾನೆ. ಪದಪಲ್ಲವ, ಅಳಕವಲ್ಲರಿ (೨-೪); ಹರ್ಷಗರ್ಭ (೭-೨೬) ಮೊದಲಾದ ರೂಪಕಾಲಂಕಾರಗಳನ್ನೂ ಬಳಸಿದ್ದಾನೆ.

ಪಂಪನ ಕಾವ್ಯಶೈಲಿಯಲ್ಲಿ ಅದೆಷ್ಟೋ ಆಡುನುಡಿಯ ವರಸೆಗಳು, ಗಾದೆ-ಯಂತಹ ಮಾತುಗಳು, ಸುಭಾಷಿತೋಕ್ತಿಗಳು ಹಾಸುಹೊಕ್ಕಾಗಿ ನೆಯ್ದುಕೊಂಡಿವೆ. ಅವು ಆಯಾ ಸನ್ನಿವೇಶಕ್ಕೆ ಅರ್ಥಪುಷ್ಟಿಯನ್ನೂ ಭಾವಪುಷ್ಟಿಯನ್ನು ದೊರಕಿಸಿಕೊಟ್ಟಿದೆ.

ಉದಾ: ಆಡುನುಡಿಯ ವರಸೆಗೆ, ಖೇಚರ ನೀನಿದನೆಂತು ನಂಬಿದೊ (೨-೮) ಇತ್ಯಾದಿ. ಗಾದೆಯಂತಹ ಮಾತು, 'ಕಟ್ಟಿದುದೆ ಸುರಿಗೆ ಮೆಟ್ಟಿದುದೆ ಕಳಂ ಇತ್ಯಾದಿ.

ಗಾದೆಯಂತಹ ಮಾತುಗಳಲ್ಲಿ ಉಪಮಾಲಂಕಾರದ ಸೊಗಸೂ ಅಲ್ಲಲ್ಲಿ ಬೆರೆತಿದೆ. 'ಹೇಯಾ ಸಾಮ್ರಾಜ್ಯಮುಪಾದೇಯಂ ಪ್ರದ್ರಜ್ಯಂ' (೧೬-೬೨) ಇತ್ಯಾದಿ ಅಸಂಖ್ಯಾತ ಸುಭಾಷಿತ ವಾಕ್ಯಗಳು ಶೈಲಿಯ ಶಾಂತಿಯನ್ನು ಅಭಿವೃದ್ಧಿಪಡಿಸಿವೆ.

ಶಬ್ದಚಿತ್ರಗಳ ಸ್ನಿಗ್ಧತೆಯನ್ನು ತಂದಿದ್ದಾನೆ. ಭರತನು ಬಾಹುಬಲಿಯ ಚರಣಗಳಿಗೆ ಬಾಗಿ ಕಣ್ಣೀರು ಹರಿಸಿದ್ದು ಮನೋವಿದ್ರಾವಕ ಸನ್ನಿವೇಶವಾಗಿದೆ. ನಿಂತಭಂಗಿಯಲ್ಲಿ ಬಾಹುಬಲಿ, ನಮಸ್ಕರಿಸಿ ಮಂಡಿಯೂರಿ ಕುಳಿತಿರುವ ಭಂಗಿಯಲ್ಲಿ ಭರತ; ಇಬ್ಬರೂ ಕಣ್ಣೀರ್ಗರೆಯುತ್ತಿದ್ದಾರೆ; ಭರತನು ಬಾಹುಬಲಿಯ ಪಾದಗಳನ್ನು ತನ್ನ ಕಣ್ಣೀರ ಜಲಧಾರೆಯಿಂದ ತೊಳೆಯುತ್ತಿದ್ದಾನೆಂಬಂತೆ ತೋರುತ್ತಿದ್ದಾನೆ; 'ಇನ್ನು ಮುಂದೆ ನೀನೇ ಸಾರ್ವಭೌಮ' ಎಂಬುದನ್ನು ಸೂಚಿಸುವಂತೆ, ಅವನಿಗೆ ಸಾರ್ವಭೌಮಪಟ್ಟವನ್ನು ಕಟ್ಟುತ್ತಿದ್ದಾನೋ ಎಂಬಂತೆ ಬಾಹುಬಲಿ ಕಣ್ಣೀರು ಸುರಿಯುತ್ತಿರುವುದು ತೋರುತ್ತದೆ (೧೪-೧೩೩) ಈ ಶಬ್ದಚಿತ್ರ ಪರಿಭಾವಿಸಿದಷ್ಟು ಅದ್ಭುತರಮ್ಯವಾಗಿದೆ. ಪಂಪನು ಬಳಸಿರುವ ಹಳಗನ್ನಡ ಶೈಲಿ ಶಕ್ತಿಪೂರ್ಣವಾಗಿದೆ. ಪಂಪನು ಗದ್ಯಶೈಲಿಯಲ್ಲಿಯೇ ತನ್ನ ಭಾವವಿಲಾಸವನ್ನೂ, ಅಲಂಕಾರಚಾತುರ್ಯವನ್ನೂ, ಪಾಂಡಿತ್ಯವನ್ನೂ ಸಮೃದ್ಧ-ವಾಗಿಯೇ ಮೆರೆದಿದ್ದಾನೆ. ಭರತನ ಬಾಲಲೀಲೆಯ ವರ್ಣನೆ, ಭರತನ ದಿಗ್ವಿಜಯ ಮುಂತಾದ ನೂರಾರು ಸಂದರ್ಭಗಳಲ್ಲಿ ಪಂಪನ ಗದ್ಯಶೈಲಿ ಸಮರ್ಥವಾಗಿ ತನ್ನ ಕಾರ್ಯವನ್ನು ನಿರ್ವಹಿಸಿದೆ.

> ಚಿತ್ತಜನೆ ವಿವಿಧ ವಿಳಾಸ ವಿಭ್ರಮೋಪದೇಶೋಪಾಧ್ಯಾಯನಾಗೆಯುಂ,
> ಉಪವನಾಂತರಾಳ ಕನಕ ಕದಳೀ ಭವನಂಗಳೆ ನಿವಾಸ
> ಭವನಂಗಳಾಗೆಯುಂ, ಭ್ರಮದ್ ಭ್ರಮರ ಭರಭಗ್ನ
> ಮೊದವೀಲತಾಂತ ಸಮಧಿಕ ಮಕರಾದ ಬಿಂದು ಚಿತ್ರಿತ
> ವಿಪುಳಪುಳಿನತಳಂಗಳೆ ವಿಶ್ರಮಣ ಭುಮಿಗಳಾಗೆಯುಂ"[೧]

ಎಂದು ಮುಂತಾಗಿ ಸಿಗುವ (೪೫೨ ಗದ್ಯ) ಈ ಗದ್ಯವು "ದೀರ್ಘ-ಸಮಾಸಯುಕ್ತವಾದ ಪ್ರಲಂಬವಾಕ್ಯ, ಆದರೂ ಪ್ರಾಸಸಮೃದ್ಧಿಯಿಂದಾಗಿ, ಲಯ-ಸೌಭಾಗ್ಯದಿಂದಾಗಿ, ನಾದಮಾಧುರ್ಯದಿಂದಾಗಿ, ನೃತ್ಯಗತಿಯ ವಿಲಾಸದಿಂದಾಗಿ, ಇಲ್ಲಿಯ ಭಾಷೆ ವೃತ್ತಗಂಧಿಯಾಗಿದೆ. ಓಜಂ ಪೂರ್ಣವಾಗಿದೆ, ಶ್ರೀಮಂತವಾಗಿದೆ".[೨]

---

೧. ದೇಜಗೌ, 'ಗದ್ಯಶೈಲಿ', ಪು. ೧೯೬.

೨. ಅದೇ., ಪು. ೧೯೭.

ಛಂದಸ್ಸಿನ ಬಳಕೆಯಲ್ಲಿಯೂ ಪಂಪನು ಸಮನ್ವಯ ದೃಷ್ಟಿಯನ್ನೇ ತೋರ್ಪಡಿಸಿದ್ದಾನೆ. ಸಂಸ್ಕೃತ ಮತ್ತು ಕನ್ನಡ ಪದ್ಯಜಾತಿಗಳ ವೈದೃಶ್ಯಗಳನ್ನು ವಿಶಿಷ್ಟವಾಗಿ ಹೇಳಿದ್ದಾನೆ.[೧]

ಪಂಪನು ತನ್ನ ಭಾಷಾಶೈಲಿಗಳ ಸೊಬಗಿನಿಂದಾಗಿ ತನ್ನ ಯುಗದ ಹಲವು ಕವಿಗಳ ಮೇಲೆ ನೇರ ಪ್ರಭಾವ ಬೀರಿದ್ದಾನೆ.[೨] ಒಬ್ಬೊಬ್ಬರೂ ಪಂಪಕವಿಯ ಶೈಲಿಯ ವಿಶೇಷಗುಣಕ್ಕೆ ಮಾರುಹೋಗಿ ಅದನ್ನು ತಮ್ಮ ಕೃತಿಗಳಲ್ಲಿ ಅಳವಡಿಸಿಕೊಳ್ಳಲು ಯತ್ನಿಸಿದ್ದಾರೆ. ರನ್ನ ಪಂಪಶೈಲಿಯ 'ಸುಭಗತ್ವ'ಕ್ಕೆ, ದುರ್ಗಸಿಂಹ 'ಗೀರ್ಗುಂಫದ ಪೆಂಡಿಗೆ ಮಾರುಹೋಗಿದ್ದಾರೆ. ಉದ್ದಕ್ಕೂ ಹಲವು ಕವಿಗಳು ಪ್ರಭಾವಿತರಾಗಿದ್ದಾರೆ. ವರ್ಣನಾಭಂಡಾರದ ಎಲ್ಲ ಸಂಪತ್ತನ್ನು ಸೂರೆಮಾಡಿದ್ದಾನೆ. 'ಹಿತಮಿತಮೃದುವಚನಂ' ಎಂಬ ತನ್ನ ಅಗ್ಗಳಿಕೆಯನ್ನೇ ಸಂರಕ್ಷಿಸಿಕೊಂಡಿದ್ದಾನೆ. ಅಷ್ಟಾದಶವರ್ಣನೆ, ಸಮಯೋಚಿತ, ಸರಸ ವರ್ಣನೆಗಳನ್ನು ಇಷ್ಟಪಡುವವರನ್ನು ಏಕಕಾಲದಲ್ಲಿ ತೃಪ್ತಿಪಡಿಸಿದ್ದಾನೆ. ಶ್ಲೇಷ, ಪ್ರಸಾದ, ಸಮತೆ, ಮಾಧುರ್ಯ ಮುಂತಾದ ಗುಣಗಳನ್ನು ಮಲ್ಲಿಕಾರ್ಜುನ ಕವಿ ಮೆಚ್ಚಿಕೊಂಡಿದ್ದಾನೆ. ಪಂಪನ 'ರೀತಿ'ಯನ್ನು ರುದ್ರಾಭಟ್ಟ ಕೊಂಡಾಡಿದ್ದಾನೆ.[೩]

ಪ್ರೌಢವಾದ ಸಂಸ್ಕೃತ ಗರ್ಭಿತ ಶೈಲಿಯ, ಸರಸವಾದ ಅಚ್ಚಗನ್ನಡ ಶೈಲಿಯ ಸಮನ್ವಯವನ್ನು ತಾನು ಸಾಧಿಸಿದ್ದೇನೆಂದು ಸೂಚಿಸುವ ಪಂಪ 'ಕೃತಿಯಂ ಪೇಳ್ದಂ ಬೆಡಂಗಪ್ಪ ಮಾರ್ಗದೊಳಂ ದೇಸೆಯೊಳಂ' (೧೬–೪೨) ಎಂದು ಹೇಳಿದ್ದಾನೆ. ಪಂಪನ ಪ್ರಕಾರ ಅವನ ಕವಿತ್ವವು ಸಮುದ್ರದಂತೆ ನಿತ್ಯನೂತನವೂ ಅತಿಗಂಭೀರವೂ ಆಗಿದೆ.

ಇವೆಲ್ಲವೂ ಭಾಷೆಯನ್ನು ಪಂಪ ಸರಿಯಾಗಿ ದುಡಿಸಿಕೊಂಡಿರುವುದಕ್ಕೆ ನಿದರ್ಶನವಾಗಿದೆ.

ರತ್ನಾಕರವರ್ಣಿಯು ಕಾವ್ಯದಲ್ಲಿ ಪಡೆದ ಮೊದಲ ಗೆಲವು ಹದಿನೆಂಟು ವರ್ಣನೆಗಳ ಸೆರೆಯಿಂದ ದೂರ ಸರಿದದ್ದು; ಇದರ ಜತೆಯಲ್ಲೇ ಆತ ರಳ ಕುಳ ಕ್ಷಳಗಳ ರಗಳೆಯಿಂದ ಮುಕ್ತನಾದದ್ದು, ಓದುಗಬ್ಬವಾಗಲಿ (ವಸ್ತುಕ) ಹಾಡುಗಬ್ಬವಾಗಲಿ (ವರ್ಣಕ) ಅದು ಕಬ್ಬಿನಂತರಬೇಕೆಂಬುದು ರತ್ನಾಕರನ ಕಾವ್ಯಮಾಪಕ. ಈ ಲಕ್ಷಣಕ್ಕೆ

೧. ಟಿ.ವಿ.ವೆಂಕಟಾಚಲಶಾಸ್ತ್ರೀ, 'ಕನ್ನಡ ಛಂದೋವಿಹಾರ'' ಪು. ೮೪.
೨. ದೇಜಗೌ, 'ಗದ್ಯಶೈಲಿ', ಪು. ೧೦೪
೩. ಸರಸ್ವತಿ ವಿಜಯ್‌ಕುಮಾರ್, 'ಕನ್ನಡ ಆದಿತೀರ್ಥಂಕರ ಚರಿತೆಗಳು', ಪು. ೩೭೬.

ಅವನ ಕಾವ್ಯ ಅತ್ಯುತ್ತಮ ಲಕ್ಷ್ಯವಾಗಿದೆ. ಇವನಿಗೆ ಶಬ್ದ ದಾರಿದ್ರ್ಯವಿಲ್ಲ. ಮಾತುಗಳು ಅರ್ಥದ ಬೆಡಗಿನಿಂದ ಅಡೆತಡೆಯಿಲ್ಲದೆ ಮೂಡಿಬರುತ್ತದೆ. ಭೋಗ ವಿಜಯದ ಭಾಗದ ಕೆಲವು ಸಂಧಿಗಳಂತೂ ಭಾವಗೀತೆಯ ಆವರಣವನ್ನು ಸೃಷ್ಟಿಸಿದೆ. ಜೇನಸೋನೆಯನ್ನು ಕರೆದಂತೆ ಹಾಡಿದ ಗಾಯನ ಗಾಯಕಿಯರ ವಿಚಾರ ಗಾನಕಲೆ ಕಾವ್ಯಕಲೆಯಾಗಿ ಅವತರಿಸಿದೆ. ಇದೇ ರೂಪಕಸಿಂಚಿತ ಭಾಷಾವಿಲಾಸ ಕಾವ್ಯಾದಾದ್ಯಂತ ಅನೇಕ ಕಡೆ ಬಂದಿದೆ. ಇವನದು ಪೌರುಷದ ಪದಬಂಧವಲ್ಲ. ಮೃದು ಪದಬಂಧ, ಲಲಿತ ಶೃಂಗಾರಾದಿ ಸುಕೋಮಲ ಭಾವಗಳನ್ನು ಅವುಗಳ ಸೂಕ್ಷ್ಮಪದರಗಳನ್ನೂ ಪಾರದರ್ಶಕವಾಗುವಂತೆ ರತ್ನಾಕರನ ಶೈಲಿ ಪ್ರತಿಫಲಿಸಿದೆ. ರತ್ನಾಕರನ ಕಾವ್ಯಪ್ರಜ್ಞೆ, ಶೃಂಗಾರ ನೈಪುಣ್ಯ, ಹಾಸ್ಯಗಾರಿಕೆ, ಲಲಿತಕಲೆಗಳ ತಿಳಿವಳಿಕೆ ಶ್ಲಾಘ್ಯವಾದುದು. ಭೋಗವಿಜಯದಲ್ಲಿ ಭರತನ ರಾಗರಸಿಕತೆಯಿದೆ.[೧] ಭರತೇಶವೈಭವವೆಂಬ ಕುಶಲ ಕವಿಶಾಲೆಯಲ್ಲಿ ಭರತೇಶ ಆಧ್ಯಾತ್ಮ ರಾಜಹಂಸ. ಭರತೇಶನ ಯೋಗ ಜನದ ಮಧ್ಯೆ, ಚೆಲುವಿನ ನಡುವೆ ಬಾಳುತ್ತಿರುವಾಗಲೇ ದೈವದ ಚೆಲುವಿನಲ್ಲಿ ಚಿತ್ತವನ್ನು ನಿಲ್ಲಿಸುವ ಚಾತುರ್ಯವನ್ನು ಬಲ್ಲ ಇವನಿಗೆ ಅರಿವಿನ ಕೊರತೆಯಿಲ್ಲ. ಶಾಸ್ತ್ರದ ಅಶುದ್ಧಿಯಿಲ್ಲ, ಸ್ಥಯಿಯಾದ ಕಾವ್ಯಪ್ರಜ್ಞೆಯಿದೆ. ಕಾವ್ಯಗುಣ ಅಗಣಿತವಾಗಿ ಶಾಸ್ತ್ರಗುಣ ಗೌಣವಾಗಿದೆ. ಮನೋಹರವೂ ಮಂಗಳಕರವೂ ಆದ ಸೌಂದರ್ಯದ ವರ್ಣ ಪ್ರಖರತೆ, ಶಕ್ತಿ ಹಳಗೂ ಆಕರ್ಷಣೆಗೆ ರತ್ನಾಕರನ ಕಣ್ಣು ಸದಾ ಬಿಡುಗಣ್ಣಾಗಿದೆ.[೨] ಹೆಣ್ಣಿನ ಚೆಲುವನ್ನು ವರ್ಣಿಸಿದಾಗಲೂ ಅವರನ್ನು ರತ್ನಾಕರ ಭರತೇಶನ ಅರಮನೆಯ, ಅಂತಃಪುರದ ಅರಗಿಣಿಗಳನ್ನಾಗಷ್ಟೇ ಅಲ್ಲದೆ ಹೇಗೆ ಗೌರವಾಸ್ಪದ ಗೃಹಿಣಿಯರೆಂಬುದನ್ನೂ ಸಂಸಾರಯೋಗದ ತಪಸ್ವಿನಿಯರೆಂಬುದನ್ನೂ ಕುಶಲ ರೂವಾರಿಯಾಗಿ ಶಬ್ದಶಿಲ್ಪದಲ್ಲಿ ಕಂಡರಿಸಿದ್ದಾನೆಂದು ಹಂಪನಾಗರಾಜಯ್ಯನವರು ಹೇಳಿದ್ದಾರೆ.

ರತ್ನಾಕರನಿಗೆ ಸೌಂದರ್ಯಗ್ರಹಣ ಶಕ್ತಿಯಂತೆ ಚಿತ್ರಕಾರನ ವರ್ಣಶಿಲ್ಪದ ಮೋಡಿ ಮಾಟವೆಲ್ಲ ವಶವಾಗಿದೆ. ಅಷ್ಟು ಅದ್ಭುತವಾದ ಚಿತ್ರಕ ಶಕ್ತಿಯಿದೆ. ಅವಸರವಿಲ್ಲದೆ, ಅಸ್ಪಷ್ಟತೆಯಿಲ್ಲದೆ ಚೆಲುವಿನ ಚಿತ್ರಗಳನ್ನು ಬಿಡಿಸುತ್ತಾನೆ. ಈ ಚಿತ್ರಗಳಿಗೆ ರತ್ನಾಕರ ಕೊಡುವ ಮಾನವೀಯ ಸ್ಪರ್ಶದಿಂದಾಗಿ ಭರತೇಶನ ಕುಟುಂಬ ಚಿತ್ರಗಳು ಚಿರಂತನ-ವಾಗಿವೆ. ಮಕ್ಕಳನ್ನು ತೊಟ್ಟಿಲಲ್ಲಿಟ್ಟು ತೂಗುವ ತಾಯಂದಿರ ಚಿತ್ರ ವಿಶ್ವವಿಖ್ಯಾತ ನಿತ್ಯನೋಟ. ಆದರೆ ಭರತೇಶ ತನ್ನ ತಾಯಿಯನ್ನು ತೂಗುಮಂಚದಲ್ಲಿ ಮಲಗಿಸಿ ತೂಗುತ್ತಿದ್ದನೆಂಬ ಭಾಗ ಮಾತೃಭಕ್ತಿಗೆ ಸುವರ್ಣ ಕಳಸವಿಟ್ಟಂತಿದೆ. ಮುಪ್ಪಿನ

---

೧. ವಿ.ಸೀ.ಮಹಾಕವಿ ಪಂಪ ೩೮೮.

೨. ಆದಿಪುರಾಣ ಸಂಗ್ರಹ ಎಲ್.ಗುಂಡಪ್ಪ, ಪು. ೯೩.

ತಾಯಿಯನ್ನು ಮಗುವಿನಂತೆ ನೋಡಿ ಭಕ್ತಿಯ ತಂಗಾಳಿ ಬೀಸುತ್ತಾನೆ. ಮಾತೃಭಕ್ತಿಯ ಬೆಳುದಿಂಗಳನ್ನು ಇಲ್ಲಿ ಕಾಣುತ್ತೇವೆ. ಇಂಥ ಹೃದಯಸ್ಪರ್ಶಿ ದೃಶ್ಯಗಳು ರತ್ನಾಕರನಲ್ಲಿ ಸಾಲುಸಾಲಾಗಿ ತೇಲಿಬರುತ್ತವೆ. ರತ್ನಾಕರನ ಮೋಹಕಶೈಲಿ, ಮಾತುಗಾರಿಕೆ, ನಾಟಕೀಯತೆ ಮೊದಲಾದವುಗಳನ್ನು ವಿಮರ್ಶಕರು ಚೆನ್ನಾಗಿ ಗುರುತಿಸಿದ್ದಾರೆ. ಇವನ ಪಾತ್ರಚಿತ್ರಣವನ್ನು ಮರೆಯುವಂತಿಲ್ಲ. ಪಾತ್ರರಚನೆಯಲ್ಲಿ ಕವಿಯ ಕೈ ಪಳಗಿದೆ; ಭರತ, ಬಾಹುಬಲಿ, ಪಂಡಿತೆ, ಕುಸುಮಾಜಿ ಮಕರಂದಾಜಿ, ಸುಭದ್ರೆ, ಅರ್ಕಕೀರ್ತಿ, ದಕ್ಷಿಣಾಂಕ, ಸಿಂಧುದೇವಿ ಮೊದಲಾದ ಪಾತ್ರಗಳನ್ನು ಮರೆಯುವಂತಿಲ್ಲ. ಪಾತ್ರಸೃಷ್ಟಿಯಲ್ಲಿ ಸನ್ನಿವೇಶ ನಿರ್ಮಾಣದಲ್ಲಿ ಕವಿಶಕ್ತಿ ಪರಿಮಳಿಸಿದೆ.

ರತ್ನಾಕರನದು ಪಂಥಬದ್ಧವಲ್ಲದ ಉದಾತ್ತ ವ್ಯಕ್ತಿತ್ವ ಎಂಬುದನ್ನು ಒಪ್ಪಿಕೊಂಡು ಆತನ ಕೆಲವು ದೋಷಗಳನ್ನು ನೆನಪಿಡಬೇಕಾಗುತ್ತದೆ. ರತ್ನಾಕರ ವಾಚಾಳಿ, ಶೃಂಗಾರವಾಗಲಿ, ಅಧ್ಯಾತ್ಮವಾಗಲಿ ಲೀಲಾಜಾಲವಾಗಿ ವಿವರಿಸಿ ಬರೆಯಬಲ್ಲನೆಂಬ ನಂಬಿಕೆಯಿಂದ ಕವಿ ಮಿತವನ್ನು ಮರೆತುಬಿಡುತ್ತಾನೆ. ಕುಮಾರವ್ಯಾಸನಂತೆ ಇವನಿಗೂ ಲಂಗುಲಗಾಮುಗಳ ನಿಲುಗಡೆ, ಹಿಡಿತ ಇಲ್ಲ. ಕಥೆ ಬೆಳೆಸುವ ಕಲೆ ಗೊತ್ತಿರುವುದರಿಂದ ಸಣ್ಣ ಸಂಗತಿಗಳ ಸುಳಿವು ಸಿಕ್ಕಿದರೆ ಸಾಕು ಅದನ್ನು ಪರ್ವತಮಾಡುತ್ತಾನೆ. ಹತ್ತು ಸಾವಿರ ಪದ್ಯಗಳ ಬೃಹತ್ ಗ್ರಂಥವಾದುದರಿಂದ ಸಾಂಗತ್ಯ ಛಂದಸ್ಸು ಏಕತಾನವೆನ್ನಿಸುವ ಸಾಧ್ಯತೆಯಿದೆ. ಇದಕ್ಕೆ ಕಂದ, ಷಟ್ಪದಿ, ರಗಳೆ, ತ್ರಿಪದಿಗಳ ವೈವಿಧ್ಯದ ಕಸಿ ಮಾಡಿದ್ದರೆ, ಛಂದಸ್ಸಿನ ದೃಷ್ಟಿಯಿಂದ ಇನ್ನೂ ಶ್ರೇಷ್ಠತೆಯನ್ನೇರುವುದು ಸಾಧ್ಯವಿತ್ತು.

ಆದರೆ ಇವೆಲ್ಲ ನಿರ್ಲಕ್ಷಿಸಬಹುದಾದ ದೋಷಗಳು, ಚಂಪುವಿಗೆ ಪಂಪ, ರಗಳೆಗೆ ಹರಿಹರ, ಭಾಮಿನಿ ಷಟ್ಪದಿಗೆ ಕುಮಾರವ್ಯಾಸ, ತ್ರಿಪದಿಗೆ ಸರ್ವಜ್ಞ ಇದ್ದಂತೆ ಸಾಂಗತ್ಯಕ್ಕೆ ರತ್ನಾಕರವರ್ಣಿ ಸೀಮಾ ಪುರುಷ.

ಸಕಲ ಲಕ್ಷಣವು ವಸ್ತುಕತೆ, ವರ್ಣಕಕಿಷ್ಟು ವಿಕಳವಾದರೂ ದೋಷವಿಲ್ಲ ಎಂದು ಹೇಳುವಂತೆ, ರಳಕುಳ ಶಿಥಿಲ ಸಮಾಸವಿಲ್ಲಾದರುವಿಲ್ಲವೇಕೆಂದರೆ ಅವರ ಕೋಟಲೆಯೇಕೆ ಪಾಡುಗಬ್ಬದೊಳು ಎಂದೂ, ಸಕಲ ಲಕ್ಷಣಕ್ಕಾಗಿ ಬಿರಸು ಮಾಡಿದರೆ ಪುಸ್ತಕದ ಬದನೆಕಾಯಹುದು ಎಂದು ಹೇಳುತ್ತಾನೆ. ಕಾವ್ಯದುದ್ದಕ್ಕೂ ಇದನ್ನು ಪ್ರತಿಜ್ಞೆಯಂತೆ ಪಾಲಿಸಿದ್ದಾನೆ. ಆನೆ ನಡೆದುದೆ ಹಾದಿ, ರತ್ನಾಕರ ನಡೆದುದೇ ಕಾವ್ಯ-ಮಾರ್ಗ. ಇವನ ಸಾಹಿತ್ಯ ಪದಗಳ ವಿಲಾಸಮಯ. ಸರಳ ಸುಂದರ ಚೇತೋಹಾರಿ ಶೈಲಿ ಕಣ್ಣಿಗೆ ಕಟ್ಟುವಂಥ ಚಿತ್ರಗಳಿಂದ ಸರ್ವಜನ ಮಾನ್ಯವಾಗಿದೆ.

ಇವನ ಶೈಲಿ ಆಡಂಬರವಿಲ್ಲದ, ಕುಸುರಿಗೆಲಸ ಪ್ರಾಧಾನ್ಯವುಳ್ಳದ್ದು. ತ್ಯಾಗ, ಪ್ರೀತಿ, ಸ್ನೇಹ, ವಾತ್ಸಲ್ಯದಂತಹ ಭಾವಗಳೇ ತುಂಬಿರುವ ಕಾವ್ಯದಲ್ಲಿ ಉಗ್ರಭಾವಗಳಿಗೆ ಎಡೆಯೇ ಇಲ್ಲ. ಸಾಂಗತ್ಯದಂತಹ ಹಾಡಿನ ಮಟ್ಟನ್ನು ಕಾವ್ಯವಾಹಕವನ್ನಾಗಿ ಮಾಡಿಕೊಂಡ ಕೀರ್ತಿ ಈತನಿಗೆ ಸಲ್ಲುತ್ತದೆ. 'ಭರತೇಶ ವೈಭವ'ದ ಮೂಲಕ ದೇಸಿಯೂ ಸಾರ್ಥಕಗೊಂಡಿದೆ.

'ಭರತೇಶ ವೈಭವ'ವು "ಜಾನಪದದ ಸಾಂಗತ್ಯ ದಾಟಿ ಮತ್ತು ಅಚ್ಚಗನ್ನಡ ದೇಸಿ ಅವನ ಪ್ರತಿಭೆಯ ಪುರುಷದಿಂದ ಹೊಳ್‌ಹೊಳೆಯುವ ಹೊನ್ನಾಗಿದೆ. ಅವನ ಬರವಣಿಗೆಯಲ್ಲಿ ಸರಸ್ವತಿಯ ಪ್ರಸನ್ನತೆಯಿದೆ. ನಿರ್ಮಲತೆ ಇದೆ".[೧]

ಕೆಲವು ದೋಷಗಳನ್ನು ಬಿಟ್ಟರೆ ಭಾಷಾಭಿವ್ಯಕ್ತಿಯನ್ನು ಸಮರ್ಪಕವಾಗಿಯೇ ಮಾಡಿದ್ದಾನೆ ಮತ್ತು ವಸ್ತುವಿಗನುಗುಣವಾಗಿ ಸಾಂಗತ್ಯವನ್ನು ತೆಗೆದುಕೊಂಡಿದ್ದಾನೆ ಮತ್ತು ಅದರಲ್ಲಿ ಯಶಸ್ವಿಯಾಗಿದ್ದಾನೆಂದು ಹೇಳಬಹುದು. ಇವನ ಶೈಲಿ ವರ್ಣನೆಗಳಲ್ಲಿ "ಹಿತಮಿತಮೃದುವಚನ" 'ಕಿರಿದರೊಳ್ ಪಿರಿದು', 'ರಸಧ್ವನಿಪ್ರವೀಣತೆ', ಅವನು ಬಳಸಿರುವುದು ಪುಲಿಗೇರಿಯ ತಿರಳ್ಗನ್ನಡ.

೧. ಕನ್ನಡ ಸಾಹಿತ್ಯ ಚರಿತ್ರೆ, ರಂ.ಶ್ರೀ.ಮುಗಳಿ, ಪು. ೭೭೮ ಸಾಂಗತ್ಯ ಕವಿಗಳು ಹಂಪ ನಾಗರಾಜಯ್ಯ.

# ಉಪಸಂಹಾರ

ಪಂಪನು ತನ್ನ ಆದಿಪುರಾಣದಲ್ಲಿ ಒಂದು ಭಾಗವಾಗಿ 'ಭರತ-ಬಾಹುಬಲಿ' ಪ್ರಸಂಗವನ್ನು ತೆಗೆದುಕೊಂಡಿದ್ದಾನೆ. ಇವನ ಉದ್ದೇಶ ಭರತನ ಅಹಂಕಾರ ನಿರಸನ ಮತ್ತು ಬಾಹುಬಲಿಯ ವ್ಯಕ್ತಿತ್ವದ ಔನ್ನತ್ಯವನ್ನು ಕಂಡರಿಸುವುದಾಗಿದೆ. ಇವನು ಬಾಹುಬಲಿಯನ್ನು ತನ್ನ ಕಥಾನಾಯಕನನ್ನಾಗಿ ಮಾಡಿಕೊಂಡಿದ್ದಾನೆ. ಮಾನವೀಯ ಮೌಲ್ಯದ ನೆಲೆಯಲ್ಲಿ ಕಥೆಯನ್ನು ಬರೆದಿದ್ದಾನೆ. ೧೦ನೆಯ ಶತಮಾನದಲ್ಲಿದ್ದ ಪಂಪನು ಧಾರ್ಮಿಕ ಕಾವ್ಯದಲ್ಲಿ ಒಂದು ಭಾಗವನ್ನಾಗಿ ಇದನ್ನು ಚಿತ್ರಿಸಿದ್ದಾನೆ.

ಇದೊಂದು ಕಾವ್ಯದ ರಸಗಟ್ಟಿ. ಈ ಭಾಗವು ಕಾವ್ಯಕ್ಕೆ ಕಳಶವಿಟ್ಟಂತಿದೆ. ಬಾಹುಬಲಿ ಯುದ್ಧದಲ್ಲಿ ಗೆದ್ದರೂ ಅಣ್ಣನಿಗೆ ರಾಜ್ಯವನ್ನು ಒಪ್ಪಿಸಿ ತಪಸ್ಸಿಗೆ ಹೋಗುತ್ತಾನೆ. ಭರತ ದಿಗ್ವಿಜಯಕ್ಕೆ ಹೋದಲ್ಲೆಲ್ಲಾ ಗೆಲುವು ಹೊಂದುತ್ತಾನೆ. ಕೊನೆಗೆ ಭರತ-ಬಾಹುಬಲಿ ಇಬ್ಬರಿಗೂ ದೃಷ್ಟಿಯುದ್ಧದಿಂದ ಮಲ್ಲಯುದ್ಧದವರೆಗೆ ಇಬ್ಬರೂ ಹೋರಾಡಲು ಬಾಹುಬಲಿಯೇ ಗೆಲ್ಲುತ್ತಾನೆ. ವಿಶ್ವವಿಜಯಿಯಾದ ಭರತನ ಅಹಂಕಾರಕ್ಕೆ ಇದು ವಜ್ರಾಘಾತ. ಆದರೆ ಸೋಜಿಗವೆಂದರೆ ತನ್ನ ಗೆಲುವಿನಿಂದ ಬಾಹುಬಲಿ ಉಬ್ಬಿಹೋಗದೆ ಅಣ್ಣನ ರಾಜ್ಯದಾಸೆಗೆ ಮತ್ತು ಅಹಂಕಾರಕ್ಕೆ ತಾನೇ ಹೇಸಿ ಬಾಹುಬಲಿ ವೈರಾಗ್ಯ ತಾಳುತ್ತಾನೆ. ತಪಸ್ಸಿಗೆ ಹೋಗುತ್ತಾನೆ. ಕೊನೆಗೆ ಯತಿದೀಕ್ಷೆ ಪಡೆಯುತ್ತಾನೆ.

ಭರತ ಬಾಹುಬಲಿಯರ ಕಥೆ ಮುಂದಿನ ಕನ್ನಡ ಕವಿಗಳಿಗೆ ಸ್ಫೂರ್ತಿಯಾಗಿ ನಿಂತಿದೆ. ಮಾನವೀಯ ಭಾವನೆಗಳು ಉತ್ಕಟವಾಗಿ ನಿರೂಪಿತವಾಗಿದೆ. ಈ ಕಥೆ ಜನಪ್ರಿಯವಾಗಿ ಕಾಲದಿಂದ ಕಾಲಕ್ಕೆ ಸಾಹಿತ್ಯ ಕ್ಷೇತ್ರದಲ್ಲಿ ಸ್ಥಾನವನ್ನು ಪಡೆದು, ಸಹೃದಯರ ಹೃದಯವನ್ನು ಸೂರೆಗೊಂಡಿದೆ.

ಭರತ – ಬಾಹುಬಲಿಯರು ನಡೆಸಿದ ಯುದ್ಧಶೈಲಿ ಯುದ್ಧಗಳ ಇತಿಹಾಸದಲ್ಲಿಯೇ ಒಂದು ವಿನೂತನವಾದ ಯುದ್ಧ ಶೈಲಿ ಹಾಗೂ ಮಾನವೀಯ ಮೌಲ್ಯಗಳ ಸ್ಥಾಪನೆ ಇಲ್ಲಿ ಜಯ-ಅಪಜಯಗಳ ಲೆಕ್ಕಕ್ಕಿಂತ ಹೆಚ್ಚಾಗಿ ಅಣ್ಣ-ತಮ್ಮಂದಿರ ಪರಸ್ಪರ ತಪ್ಪೊಪ್ಪಿಗೆ ಮತ್ತು ಪಶ್ಚಾತ್ತಾಪದ ನಿಲುವು. ಆ ನಿಲುವುಗಳೇ ಅವರನ್ನು ಮಹಾನ್ ವ್ಯಕ್ತಿಗಳ ಹಂತಕ್ಕೇರಿಸುವ ಸಂಗತಿಗಳು. ಕೊನೆಗೆ ಈ ನಿಲುವಿನಲ್ಲಿ ತೋರುವ ಭಾವ-ವಿಭಾವಗಳು ಶಾಂತರಸದಲ್ಲಿ ಮಾರ್ಕೊಳ್ಳುವುದನ್ನು ಭರತ-ಬಾಹುಬಲಿಯರ ಕಥಾ ಸನ್ನಿವೇಶಗಳಲ್ಲಿ ಕಾಣಬಹುದು.

ಭಾವ-ವಿಭಾವಗಳು ಶಾಂತರಸದಲ್ಲಿ ಮಾರ್ಕೊಳ್ಳುವುದನ್ನು ಭರತ-ಬಾಹುಬಲಿಯರ ಕಥಾ ಸನ್ನಿವೇಶಗಳಲ್ಲಿ ಕಾಣಬಹುದು.

ಆದಿಪುರಾಣ ಯುದ್ಧವಿರೋಧಿ ಎನ್ನುವುದಕ್ಕೆ ಭರತ -ಬಾಹುಬಲಿಯರ ಮಧ್ಯೆ ನಡೆಯುವ ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧಗಳೇ ಸಾಕ್ಷಿ. ಇದು ರಕ್ತಪಾತ-ವಿಲ್ಲದ ಯುದ್ಧ. ಅದರಲ್ಲಿ ಗೆದ್ದವನನ್ನು ವಿಜಯಿ ಎಂದು ಒಪ್ಪಿಕೊಳ್ಳುವುದು ಒಂದು ದೃಷ್ಟಿಯಿಂದ ಯುದ್ಧವಿರೋಧಿ ಎಂದು ಪರಿಗಣಿಸಬಹುದು. ಆದರೆ, ಪಂಪ ಕಲಿತನವನ್ನು ಒಪ್ಪಿಕೊಂಡವನು. ಇಡೀ ಯುಗವೇ ಕಲಿತನವನ್ನು ಒಪ್ಪಿಕೊಂಡಿತ್ತು. ಈ ಕಲಿತನ ಮತ್ತು ಅಹಿಂಸೆಯನ್ನು ಪ್ರತಿಪಾದಿಸುವ ಜೈನಧರ್ಮ – ಇವೆರಡನ್ನೂ ಪಂಪ ಹೇಗೆ ಹೊಂದಾಣಿಕೆ ಮಾಡಿದ್ದಾನೆ ಎನ್ನುವುದು ಬಹಳ ಮುಖ್ಯ.

ಮನುಷ್ಯ ಜೀವನ, ಮನುಷ್ಯ ಸಮಾಜ ಮತ್ತು ಮನುಷ್ಯ ಸಂಬಂಧಗಳನ್ನು ಕುರಿತಂತೆ ಕೆಲವು ಮಹತ್ವದ ಪ್ರಶ್ನೆಗಳನ್ನು ಕೇಳಿಕೊಂಡು, ಅವುಗಳ ಉತ್ತರಕ್ಕಾಗಿ ಅರಸುವುದರಿಂದ ಆದಿಪುರಾಣವು ಮುಖ್ಯವಾಗುತ್ತದೆ. ಈ ಕಾವ್ಯವು ತನ್ನ ಉತ್ತರಗಳನ್ನು ಕಂಡುಕೊಳ್ಳುವುದು ಮತ್ತು ಓದುಗರಿಗೆ ತಲುಪಿಸುವುದು ಶುಷ್ಕವಾದ ನೀತಿಬೋಧೆಯಿಂದ ಅಲ್ಲ. ಬದಲಾಗಿ ಓದುಗನನ್ನು ಕೂಡ ಆತ್ಮಸಾಕ್ಷಾತ್ಕಾರದ ಹಾದಿಯಲ್ಲಿ ಕರೆದೊಯ್ಯುತ್ತದೆ. ಈ ಪ್ರಶ್ನೆಗಳು ಮತ್ತು ಹುಡುಕಾಟಗಳು ಇಂದಿಗೂ ಮನುಷ್ಯನನ್ನು ಕಾಡುತ್ತಿರುವುದರಿಂದ ಆದಿಪುರಾಣವು ಪ್ರಸ್ತುತವೂ ಆಗಿದೆ. ಭೋಗಲಾಲಸೆ, ಮಹತ್ವಾಕಾಂಕ್ಷೆ, ಯುದ್ಧ, ಅಹಂಕಾರ ಮುಂತಾದವು ಇಂದಿಗೂ ನಮ್ಮನ್ನು ಬಾಧಿಸುತ್ತಿವೆ.

ಪಂಪನ ಆದಿಪುರಾಣ ಕೇವಲ ಜೈನರ ಆದಿತೀರ್ಥಂಕರನ ಪುರಾಣ ಮಾತ್ರವಾಗದೆ ಮನುಕುಲದ ವಿಕಾಸಕಥನವನ್ನು ಪ್ರತಿಮಾ ವಿಧಾನದಲ್ಲಿ ಧ್ವನಿಸುವ ಆದಿಮ ಪುರಾಣವೂ ಆಗಿದೆ. ಪಾಪಪುಣ್ಯಗಳ ತೂಗುತಕ್ಕಡಿಯಲ್ಲಿ ಆತ್ಮದ ಯಾನವನ್ನು ಅಳೆದುನೋಡುವ ಒಣ ವ್ಯಾಪಾರದ ಕಥಾ ಸಂಗತಿ ಇದಲ್ಲ. ಹುಟ್ಟು ಸಾವಿನ ನಿಸರ್ಗ ಕಟ್ಟಳೆಯ ನಡುವೆ ಒಳಿತು ಕೆಡುಕಿನ ಏಳುಬೀಳಿನ ಮಾನವ ಚೇತನಗಳ ವಿಕಾಸಗತಿಯ ಮಹಾಯಾನವನ್ನು ಪ್ರತಿಮಿಸುವ ಕಥನವಿದು. ಇಲ್ಲಿ ಭವಾವಳಿಯೆಂಬುದು ಜನ್ಮಾಂತರಗಳ ಹುಟ್ಟುಸಾವಿನ ಕರ್ಮ ಸವೆಸುವ ಕ್ರಿಯೆಯಾಗದೆ ವ್ಯಕ್ತಿತ್ವ ಶೋಧದ ಜೀವನ ಇಥಿಯಾಗುತ್ತದೆ. ಈ ಜಿಜ್ಞಾಸೆ ಮೇಲುನೋಟಕ್ಕೆ ಒಂದು ಧಾರ್ಮಿಕ ಸಿದ್ಧಾಂತದ ಚೌಕಟ್ಟಿನಲ್ಲಿ ಬಂಧಿತವಾಗಿ ಹರಿದುಬರುತ್ತಿರುವಂತೆ ಕಂಡರೂ ಈ ಚೌಕಟ್ಟು, ತತ್ತ್ವ ಪ್ರಣಾಳಿಕೆಯ ಜಡಗೆರೆಯಲ್ಲ.

ಭರತ ಬಾಹುಬಲಿಯ ಪ್ರಸಂಗ ಪಂಪನ ಯುದ್ಧವಿರೋಧಿ ನಿಲುವನ್ನು ದೃಢವಾಗಿ ಮನಗಾಣಿಸುವ ಪ್ರಸಂಗ. ಅಹಂಕಾರ ನಿರಸನವನ್ನು ಆತ್ಮವಿಮರ್ಶೆಯ ನೆಲೆಯಲ್ಲಿ ಬೆಲೆಸುತ್ತಿದೆ. ಇಮದು ಜಗತ್ತು ಅತಿಭೋಗದ ದುರಾಸೆ ಹಾಗೂ ಯುದ್ಧಕೋರತನದ ಹಿಂಸಾಭಾವಗಳ ಆಕ್ರಮಣದಲ್ಲಿ ತಲ್ಲಣಿಸುತ್ತಿದೆ. ಭರತ ಚಕ್ರಿಯ ಅಹಂಕಾರ ನಿರಸನ ಹಾಗೂ ಬಾಹುಬಲಿಯ ತ್ಯಾಗಶೀಲ ಭಾವ ಪಂಪನಲ್ಲಿ ಚಿತ್ರಿತವಾದ ಬಗೆ ಪಂಪನ ಮನೋಧರ್ಮವನ್ನು ಸ್ಪಷ್ಟಪಡಿಸುತ್ತದೆ.

ರತ್ನಾಕರವರ್ಣಿಯ ಕಾವ್ಯದ ಕಥಾನಾಯಕ ಭರತನೇ ಆಗಿದ್ದಾನೆ. ರತ್ನಾಕರನಿಗೆ ಎಲ್ಲವೂ ಭರತನೇ ಆಗಿದ್ದಾನೆ. ಭರತನ ವ್ಯಕ್ತಿತ್ವವನ್ನು ವೈಭವೀಕರಿಸಿ ಔನ್ನತ್ಯದಲ್ಲಿ ನಿಲ್ಲಿಸುವ ತನ್ನ ಉದ್ದೇಶದಲ್ಲಿ ಸಫಲನಾಗಿದ್ದಾನೆ. ಭರತನನ್ನು ಕಥಾನಾಯಕನನ್ನಾಗಿ ಮಾಡಿಕೊಂಡು ವಿಸ್ತಾರವಾಗಿ ವಿವರಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ. ಕಥೆಗಾಗಿ ಆತ ಯಾರಿಗೆ ಋಣಿಯಾಗಿದ್ದರೂ ಸರಿಯೇ ಅವುಗಳನ್ನು ಮೀರಿದ ಅದ್ಭುತದರ್ಶನ ಭರತೇಶ ವೈಭವದಲ್ಲಿದೆ. ೮೦ ಸಂಧಿಗಳು, ಸು. ೧೦ ಸಾವಿರ ಸಾಂಗತ್ಯಗಳೂ ಇರುವ ಈ ಕಾವ್ಯವನ್ನು ಅವನು ೯ ತಿಂಗಳುಗಳಲ್ಲಿ ಬರೆದದ್ದು ಒಂದು ಆಶ್ಚರ್ಯವೇ ಸರಿ.

ಭರತೇಶ ವೈಭವದಲ್ಲಿ ಆದಿತೀರ್ಥಂಕರನ ಹಿರಿಯ ಮಗನಾದ ಭರತೇಶನೂ ತನ್ನ ನಿರಾತಂಕವಾದ ಸಮನ್ವಯಪೂರ್ಣವಾದ ರಸಿಕ ಜೀವನವನ್ನು ತನ್ನ ೯೬,೦೦ ರಾಣಿಯರೊಂದಿಗೆ ನಡೆಸುತ್ತಿರುವಾಗ ಆಯುಧಾಗಾರದಲ್ಲಿ ಚಕ್ರರತ್ನ ಉದಿಸಿ ದಿಗ್ವಿಜಯಕ್ಕೆ ಹೋಗಬೇಕಾಗಿ ಬಂದಾಗ ದಿಗ್ವಿಜಯದಲ್ಲಿ ಗೆಲವು ಸಾಧಿಸಿ ಹಿಂದಕ್ಕೆ ಬರುತ್ತಿರುವಾಗ ಅವನ ತಮ್ಮ ಬಾಹುಬಲಿಯ ರಾಜಧಾನಿಯಾದ ಪೌದನಪುರದ ಬಾಗಿಲಮುಂದೆ ಆ ಚಕ್ರರತ್ನ ನಿಂತಾಗ ಅವರೊಡನೆ ಬಾಹುಬಲಿ ಸೆಣಸಲು ಹೊರಬರುತ್ತಾನೆ. ಆದರೆ ಭರತ ಅವನೊಡನೆ ಹೋರಾಡದೇ ತನ್ನ ಮೃದುರೂಪ-ಗಳಿಂದಲೇ ಅವನ ಮನ ಒಲಿಸುತ್ತಾನೆ. ಬಾಹುಬಲಿ ವಿರಕ್ತನಾಗಿ ದೀಕ್ಷೆ ಪಡೆದು ತಪೋನಿರತನಾಗುತ್ತಾನೆ. ಅವನ ತಾಯಿಮಕ್ಕಳೂ ಸನ್ಯಾಸ ಸ್ವೀಕರಿಸುತ್ತಾರೆ. ಇದಾದ ಕೆಲವು ಕಾಲದ ನಂತರ ಭರತನೂ ಕೂಡ ತನ್ನ ತಂದೆಯೊಡನೆ ಮಾತನಾಡಿ ತಾನೂ ವೈರಾಗ್ಯತಾಳಿ ತಪಸ್ಸಿನಿಮದ ಕೈವಲ್ಯ ಪದವಿಯನ್ನು ಪಡೆಯುತ್ತಾನೆ. ಭರತೇಶನನ್ನು ರಾಜಯೋಗಿ, ಜಿನಯೋಗಿ, ತ್ಯಾಗಿ, ಭೋಗಿ, ರಸಿಕ-ವಿರಕ್ತ ಎಂದು ರತ್ನಾಕರನು ಚಿತ್ರಿಸಿದ್ದಾನೆ.

ಇವನು ಭೋಗವಿಜಯ, ದಿಗ್ವಿಜಯ, ಯೋಗವಿಜಯ, ಅರ್ಕಕೀರ್ತಿ ವಿಜಯ, ಮೋಕ್ಷವಿಜಯ ಎಂದು ೫ ಭಾಗಗಳನ್ನು ಮಾಡಿಕೊಂಡು ಅದರಲ್ಲಿ ಯಶಸ್ವಿ-

ಯಾಗಿದ್ದಾನೆ. ಭೋಗವಿಜಯದಲ್ಲಿ ಭರತನ ಜೀವನ ಮತ್ತು ವ್ಯಕ್ತಿತ್ವಗಳನ್ನು ಸೊಗಸಾಗಿ ವರ್ಣಿಸಿದ್ದಾನೆ. ಭರತೇಶನ ಜನನ ಬಾಲ್ಯಗಳನ್ನು ಜಿನಸೇನರಂತೆ ವರ್ಣಿಸಿದೆ. ಭರತನ ಉದಾತ್ತತೆಗೆ ಯಾವುದೇ ಭಂಗ ಬರಕೂಡದ್ದೆಂದು ಅಣ್ಣತಮ್ಮಂದಿರಲ್ಲಿ ಯಾವುದೇ ಬಗೆಯ ಯುದ್ಧವನ್ನು ಹೂಡದೇ ಅವನು ಬಾಹುಬಲಿಯನ್ನು ಮಾತಿನಿಂದ ಮನ ಒಲಿಸಿದನೆಂದು ಮಾರ್ಪಾಡು ಮಾಡಿಕೊಂಡಿದ್ದು ಕವಿ ಕಥೆಯನ್ನು ಬದಲಾಯಿಸಿಕೊಳ್ಳುವ ಸ್ವತಂತ್ರ ಮನೋಧರ್ಮ ರತ್ನಾಕರವರ್ಣಿಗೆ ಆ ಬಗೆಯ ಸ್ವತಂತ್ರ ಮನೋವೃತ್ತಿ ಇತ್ತು ಎಂಬುದು ವ್ಯಕ್ತವಾಗುತ್ತದೆ.

ಭರತೇಶನ ಆತ್ಮವೈಭವವನ್ನು "ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ, ಭೂಮಂಡಲದಲ್ಲಿದ್ದು ನಿಸ್ಸೀಮ" ಎಂದು ತನ್ನ ಕಾವ್ಯದಲ್ಲಿ ನಿಜವಾಗಿಯೂ ಭರತ ಚಕ್ರವರ್ತಿಯ ವೈಭವವಾಗಿ ಬೆಳೆದುಕೊಂಡು ಹೋಗುತ್ತದೆ. ತನ್ನ ಕೃತಿಯಲ್ಲಿ ತ್ಯಾಗ-ಭೋಗ ಸಮನ್ವಯವನ್ನು ಪರಿಣಾಮಕಾರಿಯಾಗಿ ಸಾಧಿಸಿದ್ದಾನೆ.

ಪಂಪನು ೯೦ ಪದ್ಯಗಳನ್ನು ಬರೆದಿದ್ದರೂ ಮತ್ತು ರತ್ನಾಕರವರ್ಣಿ ೯೦೦ ಪದ್ಯಗಳನ್ನು ಬರೆದಿದ್ದರೂ ಸಹ ರತ್ನಾಕರವರ್ಣಿ ಪಂಪನ ಪ್ರತಿಭೆಯ ಮಟ್ಟಕ್ಕೆ ಸರಿದೂಗಲಾರನೆಂದು ಹೇಳಬಹುದು. ರತ್ನಾಕರವರ್ಣಿಯು ಇಡೀ ಜೈನಧರ್ಮದ ಕೆಲವು ಸಿದ್ಧ ಚೌಕಟ್ಟಿನಲ್ಲಿಯೇ ಹೇಳುವುದಕ್ಕೆ ಹೋಗಿದ್ದಾನೆ. ಲೌಕಿಕ ಆಸಕ್ತಿಯಲ್ಲಿಯೇ ಹೇಳಿದ್ದಾನೆ. ಇವನು ಜೈನಧರ್ಮ ಪತನವಾಗಿದ್ದ ಕಾಲದಲ್ಲಿ ಪ್ರಚಾರ ಮಾಡುವುದಕ್ಕೆ ಹೀಗೆ ಮಾಡಿರಬೇಕು. ಆಧ್ಯಾತ್ಮದ ನೆಲೆಯಲ್ಲಿ ಹೇಳಿದ್ದಾನೆ.

ಸಾಂಗತ್ಯದ ಆಯ್ಕೆ ಮತ್ತು ಭರತನನ್ನು ಆಯ್ಕೆ ಮಾಡಿಕೊಂಡಿದ್ದು ಕಾರಣವಿರಬಹುದು. ಜೈನಧರ್ಮದ ನಂಬಿಕೆ ಮತ್ತು ಛಂದಸ್ಸಿನ ಜನಪ್ರಿಯತೆಯೂ ಕಾರಣವಾಗಿದೆ. ಪಂಪನ ಕಾಲದಲ್ಲಿ ವೀರ, ಚಾಗ, ಶೌಚ, ನನ್ನಿ, ಛಲ, ಅಭಿಮಾನ ಮತ್ತು ರತ್ನಾಕರವರ್ಣಿಯ ಕಾಲದ ಭಕ್ತಿಯುಗವೂ ಕಾರಣವಾಗಿದೆ.

ಮೌಲ್ಯಗಳನ್ನು ಸಮಾಜಕ್ಕೆ ಕೊಡುವುದರ ಮೂಲಕ ಪಂಪ ಸರ್ವಕಾಲಿಕ ಪ್ರಸ್ತುತನಾಗಿದ್ದಾನೆ. ಇವನು ಅರ್ಜುನ, ಕರ್ಣ, ದುರ್ಯೋಧನ ಮೊದಲಾದ ಪಾತ್ರಗಳಿಗೆ ಅದರಲ್ಲಿಯೂ ಕರ್ಣನಂತಹ ಶೋಷಿತ ಪಾತ್ರಕ್ಕೆ ಜೀವಕಳೆ ತುಂಬಿದ್ದಾನೆ. ಇದನ್ನು ದಲಿತ ದಿಗ್ವಿಜಯವೆಂದೇ ಹೇಳಬಹುದಾಗಿದೆ.

ಆದರೆ ರತ್ನಾಕರವರ್ಣಿಯು ತ್ಯಾಗ-ಭೋಗ ಸಮನ್ವಯವನ್ನು ಸಾಧಿಸಿ ಭೋಗಿ-ಯಾಗಿದ್ದು ಕೊನೆಗೆ ಯೋಗಿಯಾದುದ್ದನ್ನು ಹೇಳಿರುವುದರಿಂದ ಇವನಲ್ಲಿ ಮೌಲ್ಯ ಪ್ರಚಾರ ಪಂಪನಷ್ಟು ಆಗಿಲ್ಲವೆಂದು ಹೇಳಬಹುದಾಗಿದೆ.

# ಗ್ರಂಥಋಣ


೧. ಆದಿಪುರಾಣ ಸಂಗ್ರಹ – ಸಂಪಾದಕರು: ಎಲ್.ಗುಂಡಪ್ಪ ಪ್ರಸಾರಾಂಗ, ಮೈಸೂರು ವಿ.ವಿ. ಮೈಸೂರು

೨. ಭರತೇಶ ವೈಭವ – ಸಂಪಾದಕರು: ತ.ಸು.ಶ್ಯಾಮರಾವ್

೩. ಶೈಲಿ –೧ – ಎಸ್.ವಿ.ರಂಗಣ್ಣ ಮೈಸೂರು

೪. ಪಂಪ ಒಂದು ಅಧ್ಯಯನ – ಸಂಪಾದಕರು: ಜಿ.ಎಸ್.ಶಿವರುದ್ರಪ್ಪ ಪ್ರಸಾರಾಂಗ, ಬೆಂಗಳೂರು ವಿ.ವಿ. ಬೆಂಗಳೂರು

೫. ರತ್ನಾಕರನ ಭೋಗಯೋಗದ ತೊಡಕು – ಡಾ. ಜಿ.ಎಸ್.ಶಿವರುದ್ರಪ್ಪ

೬. ದೇ.ಜ.ಗೌ.ಗದ್ಯಶೈಲಿ – ಪ್ರಕಾಶಕರು: ಡಿ.ವಿ.ಕೆ.ಮೂರ್ತಿ, ಮೈಸೂರು

೭. ಕನ್ನಡ ಸಾಹಿತ್ಯ ಚರಿತ್ರೆ – ರಂ.ಶ್ರೀ.ಮುಗಳಿ

೮. ಸಾಹಿತ್ಯ ಕವಿಗಳು (ಸಾಮಾನ್ಯನಿಗೆ ಸಾಹಿತ್ಯಚರಿತ್ರೆ) ಸಂಪುಟ–೮ – ಹಂಪಾ ನಾಗರಾಜಯ್ಯ ಬೆಂಗಳೂರು ವಿ.ವಿ. ಬೆಂಗಳೂರು

೯. ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು – ರಾ.ಗೌ.

೧೦. ಪಂಪ –೧೧೦೦ – ಸಂ. ಗುರುಲಿಂಗ ಕಾಪಸೆ ಪ್ರಕಾಶನ: ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಮುದ್ರಣ ೨೦೦೪.

೧೧. ಆದಿಪುರಾಣ ದೀಪಿಕೆ – ಎಲ್.ಗುಂಡಪ್ಪ

೧೨. ಕನ್ನಡ ಆದಿತೀರ್ಥಂಕರ ಚರಿತೆಗಳು – ಸರಸ್ವತಿ ವಿಜಯಕುಮಾರ್ ಮುದ್ರಣ : ೧೯೯೪

೧೩. ನಾಡೋಜ ಪಂಪ – ಮುಳಿಯ ತಿಮ್ಮಪ್ಪಯ್ಯ ಕನ್ನಡ ಸಂಸ್ಕೃತಿ ಇಲಾಖೆ

೧೪. ಮಹಕಾವಿ ಪಂಪ – ವಿ.ಸೀ


*****